ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ.

# ಚಂದ್ರಕಾಂತ.

( ಹೃದಯಂಗಮವಾದ ಸಾಮಾಜಿಕ ಕಾದಂಬರಿ.



ಲೇಖಕ ಮತ್ತು ಪ್ರಕಾಶಕ:—

ಭಿ. ಪ. ಕಾಳೆ,

ಶ್ರೀ ಶೇಷಾಚಲ ಗ್ರಂಥಮಾಲೆ

೩೦೦ ಮದಿಹಾಳ ಧಾರವಾಡ.





೨ನೇ ಮುದ್ರಣ

1943

ಬೆಲೆ ೧೨ ಆಣೆ

# ಚಂದ್ರಕಾಂತ



೧ನೇ ತರಂಗ :— **ಇಹಳು ನಿಮಗೇನಾಗಬೇಕು ?**



**ಚಂದ್ರಕಾಂತ**ನ ತಂದೆಯ ಕಾಲಶ್ರಾದ್ಧದ ಮುನ್ನಾದಿನವೇ ಯಾವುದೊಂದು ಕ್ಷುಲ್ಲಕ ಕಾರಣದ ಮೂಲಕ ಚಂದ್ರಕಾಂತನಿಗೂ ಆತನ ಚಿಕ್ಕಪ್ಪನಾದ ಮಾರ್ತಂಡರಾಯನಿಗೂ ಮನಸ್ತಾಪವುಂಟಾಗಿತ್ತು. ಅದರಿಂದ ಮರುದಿನ ಮಾರ್ತಂಡರಾಯನು ತನ್ನ ಪೂಜ್ಯ ಅಣ್ಣನ ಕಾಲಶ್ರಾದ್ಧಕ್ಕೆ ಎಂದಿನಂತೆ ಬಂದು ಪಿತೃಕಾರ್ಯವನ್ನು ಯಥಾ ಸಾಂಗವಾಗಿ ನೆರವೇರಿಸಿದರೂ, ತಾನಾಗಲಿ, ತನ್ನ ಮನೆಯ ಯಾವುದೊಂದು ಪಿಳ್ಳೆಯೇ ಆಗಲಿ, ಚಂದ್ರಕಾಂತನ ಮನೆಯಲ್ಲಿ ಒಂದು ಅಗಳು ಕೂಡ ಉಣ್ಣಲಿಲ್ಲ; ಒಂದು ಹನಿ ನೀರು ಸಹ ಕುಡಿಯಲಿಲ್ಲ. ಬ್ರಾಹ್ಮಣರ ಭೋಜನಾನಂತರದಲ್ಲಿ ಚಂದ್ರಕಾಂತನು ತನ್ನ ಕಕ್ಕನ ಎದುರಿಗೆ ಕೈಜೋಡಿ ನಿಂತು :— ಚಿಕ್ಕಪ್ಪಾ, ನನ್ನಿಂದ ಅನಂತ ಅಪರಾಧಗಳಾಗಿರುತ್ತವೆ. ನೀವು ನನಗೆ ತಂದೆಯ ಸಮಾನರು; ನಾನು ಮಗನಂತಿರುವೆನು. ಇದೊಂದು ಸಾರೆ ನನ್ನ ಈ ಮಹದಪರಾಧವನ್ನು ಕ್ಷಮಿಸಿರಿ, ಎಂದು ಪ್ರಾರ್ಥಿಸಿದನು.

"ಅಪ್ಪಾ, ನೀನು ಪುಣೆ-ಮುಂಬಯಿಗಳಲ್ಲಿದ್ದು ಬಿ. ಎ. ಎಂ. ಏ. ಪಾಸಾಗಿ, ವಿದ್ವಾಂಸನೂ ಬುದ್ಧಿವಂತನೂ ಆಗಿರುತ್ತೀ. ನಾನೇನು, ಹಳ್ಳಿಯ ಮೂರ್ಖನು! ಇನ್ನು ಮೇಲೆ ನಮ್ಮ ನಿಮ್ಮಲ್ಲಿ ಕೂಡಿ ನಡೆಯಲಾರದು. "ಪ್ರಾಪ್ತೇ ಷೋಡಶೇ ವರ್ಷೇ ಪುತ್ರ-ಮಿತ್ರ ಸಮಾಚರೇತ್" ಎಂದು ಶಾಸ್ತ್ರಕಾರರು ಹೇಳಿರುವಂತೆ, ನಿನ್ನನ್ನು ಇನ್ನು ನಿನ್ನ ಇಷ್ಟದಂತೆ ನಡೆಯಗೊಡುವದೇ ನಮ್ಮ ಧರ್ಮವಾಗಿರುತ್ತವೆ." ಎಂದು ಮಾರ್ತಂಡರಾಯನು ನುಡಿದನು.

ತಮ್ಮ ಚಿಕ್ಕಪ್ಪನು ತನ್ನ ಕ್ಷುಲ್ಲಕ ತಪ್ಪಿಗಾಗಿ ಈ ತರದ ನಿಷ್ಠೂರ ವರ್ತನ ತಾಳಿದ್ದನ್ನು ಕಂಡು, ಇನ್ನು ಮೇಲೆ ಮಾರ್ತಂಡರಾಯನೊಡನೆ ಯಾವ ಬಗೆಯ ಸಂಬಂಧವನ್ನೂ ಇಡಬಾರದೆಂದು ಚಂದ್ರಕಾಂತನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. ಚಂದ್ರಕಾಂತನ ತಂದೆಯ ಜೀವಮಾನ

ಲ್ಲಾದರೂ ಆ ಅಣ್ಣ-ತಮ್ಮಂದಿರಲ್ಲಿ ಅಷ್ಟೊಂದು ಸಖ್ಯವಿರಲಿಲ್ಲ. ಆದರೂ ಅವರು ಅವಿಭಕ್ತರಾಗಿದ್ದು, ತಮ್ಮ ಆಹಾರ-ವ್ಯವಹಾರಗಳನ್ನು ಏಕತ್ರವಾಗಿ ಸಾಗಿಸುತ್ತಿದ್ದರು; ಆದರೆ ಚಂದ್ರಕಾಂತನ ಇಂದಿನ ಆ ಕ್ಷುಲ್ಲಕ ಮಾತಿನ ಮೂಲಕ ಈಗ ಅದೂ ಕಟ್ಟಾಯಿತು. ಚಂದ್ರಕಾಂತನ ತಂದೆಯು ಹೇರಳ ವಾಗಿ ಹಣ ಗಳಿಸಿಟ್ಟಿದ್ದನು; ಆದರೆ ಚಂದ್ರಕಾಂತನಿಗೆ ಮನೆಯಲ್ಲಿ ಆಪ್ತೀ ಯರೂ ಸ್ವಜನರೂ ಯಾರೂ ಇರಲಿಲ್ಲ. ಅಪವಾದಕ್ಕೆಂದು ಮಕ್ಕಳು-ಮರಿ ಗಳಿಲ್ಲದ ಹಾಗು ದಿನಹೋದ ಆತನ ಒಬ್ಬ ಸೋದರ ಮಾವನು ತನ್ನ ದ್ವಿತೀಯ ಸಂಬಂಧದ ತರುಣ ಹೆಂಡತಿಯೊಡನೆ ಚಂದ್ರಕಾಂತನ ಮನೆಯಲ್ಲೇ ಇರುತ್ತಿದ್ದನು.

ಮಾರ್ತಂಡರಾಯನು ಚಂದ್ರಕಾಂತನಿಂದ ವಿಭಕ್ತನಾಗಿ ಬೇರೆ ಕಡೆಗೆ ಇರಹತ್ತಿದ ಬಳಿಕ, ಒಂದು ದಿನ ಚಂದ್ರಕಾಂತನು ತನ್ನ ಮನೆಯ ಮುಖ್ಯ ಗುಮಾಸ್ತನನ್ನು ಕರೆದು:—"ವಹಿವಾಟದಾರರೇ, ಕೆಲ ದಿನಗಳ ಮಟ್ಟಿಗೆ ನಾನು ಬೇರೂರಿಗೆ ಹೋಗಿ ಬರಬೇಕಾಗಿದೆ. ನೀವು ಇದುವರೆಗೆ ನಮ್ಮ ಮನೆಯ ಜಮಾ-ಖರ್ಚು, ಬರ-ಕೊಡುವದನ್ನು ಹೇಗೆ ಸಾಗಿಸುತ್ತ ಬಂದಿರು ವಿರೋ, ಇನ್ನು ಮೇಲಾದರೂ ಅದೇ ರೀತಿಯಿಂದ ಸಾಗಿಸುತ್ತಿರ್ರಿ. ಮರಳಿ ಬರಲಿಕ್ಕೆ ನನಗೆ ತುಸ ತಡವಾದೀತು. ಆದರೂ ನೀವು ಯಾವ ಬಗೆಯ ಅವ್ಯವಸ್ಥೆಗೂ ಇಂಬುಗೊಡದಂತೆ ನನ್ನ ಮನೆತನವನ್ನು ಸಾಗಿಸಬೇಕು" ಎಂದು ಹೇಳಿದನು.

ಚಂದ್ರಕಾಂತನ ಈ ಬೇತನ್ನು ತಿಳಿದು, ಆತನ ಮಾವನಾದ ವಲ್ಲಭ ರಾಯನು ಅದಕ್ಕೆ ಪ್ರತಿಯಾಗಿ ಅಂದನೇನಂದರೆ:—ತಮ್ಮಾ, ಚಂದ್ರಕಾಂತಾ, ಈ ಸಮಯದಲ್ಲಿ ನೀನು ಬೇರೆ ಕಡೆಗೆ ತೆರಳುವದು ವಿಹಿತವಲ್ಲ. ಈಗ ನಿನ್ನ ಮನಸ್ಸು ತ್ರಸ್ತವಾಗಿರುವದೇನೋ ನಿಜ; ಆದರೂ ನೀನು ಈಗ ವಿವೇಕವನ್ನು ತಾಳಿ, ಮನೆಬಿಟ್ಟು ಎಲ್ಲಿಗೂ ಹೋಗಬೇಡ.

ಬಿಸಿ ನೆತ್ತರದ ಚಂದ್ರಕಾಂತನಿಗೆ ಅನುಭವಿಕನೂ ವೃದ್ಧನೂ ಆಗಿದ್ದ ವಲ್ಲಭರಾಯನ ನುಡಿಗಳು ರುಚಿಸಲಿಲ್ಲ. ಆತನು ತನ್ನ ಆಸ್ತಿ, ವ್ಯವಹಾರಗಳ ಕಾರಭಾರವನ್ನೆಲ್ಲ ತನ್ನ ವಹಿವಾಟದಾರನಿಗೆ ವಹಿಸಿದಂತೆ, ತನ್ನ ಮನೆಯ ಕಾರಭಾರವನ್ನೆಲ್ಲ ತನ್ನ ಮಾವನಿಗೆ ವಹಿಸಿ, ತಾನೊಬ್ಬನೇ ವಿದೇಶಕ್ಕೆ ಹೊರ ಟನು. ಆತನು ಒಬ್ಬ ಸೇವಕನನ್ನು ಕೂಡ ತನ್ನ ಸಂಗಡ ಕರೆದೊಯ್ಯಲಿಲ್ಲ!

ಚಂದ್ರಕಾಂತನು ಹಾಗೆ ಒಮ್ಮಿಂದೊಮ್ಮೆ ಹೊರಟು ಹೋಗಲು, ವೃದ್ಧ ವಲ್ಲಭರಾಯನ ತರುಣ ಪತ್ನಿಯಾದ ಶಶಿಮುಖಿಯು ವಲ್ಲಭರಾಯ

ನನ್ನು ಏಕಾಂತಕ್ಕೆ ಕರೆದು, ಒಳ್ಳೇ ಒಯ್ಯಾರದಿಂದ:—ನಾಥರೇ, ತಾವು ಈಗೊಂದು ಕೆಲಸ ಮಾಡಿದ್ದರೆ ವಿಹಿತವಾಗುತ್ತಿತ್ತಲ್ಲ! ಎಂದು ಅಂದಳು.

ಅದಕ್ಕೆ ವಲ್ಲಭರಾಯನು ಒಳ್ಳೇ ಆತುರದಿಂದ:—ಏನದು?

"ಚಂದ್ರಕಾಂತನಂತೂ ವಿದೇಶಕ್ಕೆ ಹೊರಟೇ ಹೋದನು. ಅವನಿಂದ ಸ್ವತ್ತು ಬರೆಸಿಕೊಳ್ಳಲಿಲ್ಲೇಕೆ? ಊರಿಗೆ ಹೋದವರ ಗತಿಯನ್ನು ದೇವರೇ ಬಲ್ಲ! ಆಕಸ್ಮಿಕವಾಗಿ ಅವನಿಗೆ ಪರದೇಶದಲ್ಲಿ ಏನಾದರೂ ಒಳಿತು-ಕೇಡು ಗಳುಂಟಾದರೆ, ಆಗ ನೀವು ನೆಲಿಸಿರುವದೆಲ್ಲಿ?"

ಪಾಪಭೀರುವಾದ ವಲ್ಲಭರಾಯನು ತನ್ನ ಎರಡೂ ಕಿವಿಗಳಲ್ಲಿ ಬೊಟ್ಟುಗಳನ್ನಿಟ್ಟುಕೊಳ್ಳುತ್ತ ನಾಲಿಗೆಯನ್ನು ಕಚ್ಚಿಕೊಂಡು, ಹೆಂಡತಿಯನ್ನು ಕುರಿತು:—ಛೀ, ಹುಚ್ಚೀ, ಇಂಥ ಅಭದ್ರ ನುಡಿಗಳನ್ನು ಮುಖದಿಂದ ನುಡಿಯಲೇಬಾರದು.

ಗಂಡನ ಆ ಭೀರುತನದ ಮಾತನ್ನು ಕೇಳಿ ಶಶಿಮುಖಿಯು ಕ್ರೋಧ ದಿಂದ:—ನೀವು ಮರುಳರು; ಬುದ್ಧಿಹೀನರು. ಮುದಿ ಹುಚ್ಚರು! ಅಂತೇ ಕೈಗೆ ಬಂದ ತುತ್ತನ್ನು ಬಾಯಿಗೆ ಹಾಕಿಕೊಳ್ಳಲಿಕ್ಕೆ ಯತ್ನಿಸಲಿಲ್ಲ ನಿಮ್ಮ ಈ ಸ್ವಭಾವಕ್ಕೆ ಏನೆನಬೇಕೊ ನನಗಂತೂ ತಿಳಿಯದಾಗಿದೆ.

ವೃದ್ಧ ವಲ್ಲಭರಾಯನಿಗೆ ಅಂದಿನ ಮಟ್ಟಿಗೆ ಹೆಂಡತಿಯ ಆ ನುಡಿಗಳು ಕರ್ಣಕಠೋರವಾಗಿ ತೋರಿದರೂ, ಮುಂದೆ ನಾಲ್ಕಾರು ದಿನಗಳಲ್ಲೇ ಅವನಿಗೆ ಹೆಂಡತಿಯ ಅಂಬೋಣವು ಸರಿಯಾದದ್ದೆಂದು ತೋರಹತ್ತಿತು. ಅದರಿಂದ ಅವನು ಪಶ್ಚಾತ್ತಾಪದಿಂದ ಚಡಪಡಿಸಲಾರಂಭಿಸಿದನು.

ಚಂದ್ರಕಾಂತನು ಮುಂದೆ ಒಂದು ವರ್ಷದ ವರೆಗೂ ನಾನಾ ಸ್ಥಳಗಳಲ್ಲಿ ಏಕಾಕಿಯಾಗಿಯೇ ಸಂಚರಿಸಿದನು. ತದನಂತರ ಗಯಾ ಕ್ಷೇತ್ರಕ್ಕೆ ಹೋಗಿ ಅಲ್ಲಿ ತನ್ನ ತಂದೆಯೇ ಮೊದಲಾದ ಪಿತೃಗಳ ಹೆಸರಿಗೆ ಪಿಂಡಗಳನ್ನರ್ಪಿಸಿದನು; ಆದರೂ ಮನೆಗೆ ತಿರುಗಿ ಹೋಗಬೇಕೆಂಬ ಇಚ್ಛೆಯು ಅವನಿಗುಂಟಾಗಲಿಲ್ಲ. ಕಾಶಿಗೆ ಹೋಗಿ, ಅಲ್ಲಿಯೇ ಕೆಲ ದಿನಗಳನ್ನು ಕಳೆಯಬೇಕೆಂದು ಬಗೆದು, ಚಂದ್ರಕಾಂತನು ಗಯಾದಿಂದ ನೆಟ್ಟಗೆ ಕಾಶಿಗೆ ಹೋದನು. ಕಾಶಿಯಲ್ಲಿ ಚಂದ್ರಕಾಂತನ ವಂಶಜರಿಗೆ ಹರಭಟ್ಟನೆಂಬುವನು ಪುರೋಹಿತನು. ಒಂದು ದಿನ ಮಧ್ಯಾಹ್ನದಲ್ಲಿ ಕ್ಯಾನ್ವಿಸ್ಸಿನ ಬ್ಯಾಗನ್ನು ಹಿಡಿದಿದ್ದ ಚಂದ್ರಕಾಂತನು ನೆಟ್ಟಗೆ ಹರಭಟ್ಟನ ಮನೆಗೆ ಹೋಗಿ ನಿಂತುಕೊಂಡನು. ಕಾಶೀಕ್ಷೇತ್ರವು ಚಂದ್ರಕಾಂತನಿಗೆ ಅಪರಿಚಿತವಾಗಿರಲಿಲ್ಲ. ಈ ಮೊದಲು ತನ್ನ ತಂದೆಯ ಸಂಗಡ ಅವನು ಹಲಕೆಲವು ಸಾರೆ ಆ ಊರಿಗೆ ಹೋಗಿದ್ದನು. ಹರಭಟ್ಟ

ನಾದರೂ ಚಂದ್ರಕಾಂತನನ್ನು ಚೆನ್ನಾಗಿ ಗುರತಿಸುತ್ತಿದ್ದನು. ಆಕಸ್ಮಿಕವಾಗಿ ಆ ವೇಷದಲ್ಲಿ ಚಂದ್ರಕಾಂತನು ಬಂದು ತನ್ನ ಎದುರಿಗೆ ನಿಂತದ್ದನ್ನು ಕಂಡು, ಆ ಪುರೋಹಿತನು ಬೆರಗಾದನು. ಕೂಡಲೆ ಅವನು ಚಂದ್ರಕಾಂತನಿಗಾಗಿ ತನ್ನ ಮನೆಯ ಅಟ್ಟದ ಮೇಲಿನ ಕೋಣೆಯೊಂದನ್ನು ತೆರವು ಮಾಡಿ ಕೊಟ್ಟನು; ಹಾಗು ನಿನ್ನ ಇಚ್ಛೆಯಿರುವ ವರೆಗೆ ನೀನು ಇಲ್ಲಿಯೇ ಇರಬೇಕೆಂದು ತಿಳಿಸಿದನು.

ಚಂದ್ರಕಾಂತನು ಕಾಶಿಯಲ್ಲಿ ಹರಭಟ್ಟನ ಮನೆಯಲ್ಲೇ ಇರಹತ್ತಿದನು. ಅವನು ಇರುತ್ತಿದ್ದ ಕೋಣೆಯ ಕಿಟಕಿಯೊಳಗಿಂದ ಕೆಳಗಿನ ಅಂತಸ್ತಿನೊಳಗಿನ ಅಡುಗೆಯ ಮನೆಯು ಚೆನ್ನಾಗಿ ಕಾಣಿಸುತ್ತಿತ್ತು. ಚಂದ್ರಕಾಂತನು ಆ ಕಿಡಿಕಿಯೊಳಗಿಂದ ಅಡುಗೆಯ ಮನೆಯ ಕಡೆಗೆ ಎಷ್ಟೋಸಾರೆ ಇಣಿಕಿಣಿಕಿ ನೋಡುತ್ತಿದ್ದನು. ಅವನು ಅಡುಗೆಯ ಜೀನಸುಗಳನ್ನಾಗಲಿ, ಅಲ್ಲಿಯ ಮಿಕ್ಕ ಪದಾರ್ಥಗಳನ್ನಾಗಲಿ ಅಷ್ಟು ಏಕಾಗ್ರತೆಯಿಂದ ನೋಡುತ್ತಿದ್ದನೆಂತಲ್ಲ; ಆದರೆ ಅಲ್ಲಿ ಅಡುಗೆಯನ್ನು ಅಡುತ್ತಿದ್ದ ಆ ತರುಣ ಅಡಿಗೆಯವಳನ್ನು ಹಾಗೆ ಪುಳುಹುಳು ಎಂದು ಹಲವು ಸಾರೆ ನೋಡುತ್ತಿದ್ದನು.

ಅಡುಗೆಯ ಆ ತರುಣ ವಿಧವೆಯು ಸುಂದರಿಯಾಗಿದ್ದಳು; ಆದರೆ ಆಕೆಯ ಮುಖಮಂಡಲವು ಶೋಕಾಗ್ನಿಯಿಂದ ಬೆಂದು ಬೆಂಡಾಗಿದ್ದಿತು. ಅವಳಲ್ಲಿ ತಾರುಣ್ಯವಿರುವದೋ ಇಲ್ಲವೋ ಎಂಬದು ಕೂಡ ಆಕೆಯ ಮುಖ ಮಂಡಲದಿಂದ ಗೊತ್ತಾಗುವಂತಿರಲಿಲ್ಲ. ಅವಳು ತನ್ನಷ್ಟಕ್ಕೆ ತನ್ನ ಕೆಲಸದಲ್ಲಿ ನಿಮಗ್ನಳಾಗಿರುತ್ತಿದ್ದಳು. ಅವಳ ಬದಿಯಲ್ಲಿ ಹತ್ತು-ಹದಿನಾಲ್ಕು ವರ್ಷದ ಒಬ್ಬ ಹುಡುಗೆಯು ಇರುತ್ತಿದ್ದು, ಅವಳು ಆಕೆಗೆ ಅಡುಗೆಯ ಸಾಹಿತ್ಯವನ್ನೊದಗಿಸಿ ಕೊಡುತ್ತಿದ್ದಳು. ಚಂದ್ರಕಾಂತನು ಅತೃಪ್ತನಯನದಿಂದ ಅವರಿಬ್ಬರನ್ನೂ ನೋಡುತ್ತಿದ್ದನು.

ಕೆಲ ದಿನಗಳ ವರೆಗೆ ಆ ಹುಡುಗೆಯ ತಾಯಿಯು ಆ ಅಪರಿಚಿತ ಚಂದ್ರಕಾಂತನ ಎದುರಿಗೆ ಸಹ ಹಾಯುತ್ತಿರಲಿಲ್ಲ. ಆತನ ಊಟವನ್ನು ಆತನ ಎದುರಿಗೆ ಇಟ್ಟು ಹೊರಟೇ ಹೋಗುತ್ತಿದ್ದಳು; ಆದರೆ ಆ ಸ್ಥಿತಿಯು ಬಹು ದಿನಗಳ ವರೆಗೆ ಉಳಿಯಲಿಲ್ಲ. ಯಾಕಂದರೆ ಚಂದ್ರಕಾಂತನು ಆಕೆಗಿಂತ ಚಿಕ್ಕವನು; ಮೇಲಾಗಿ ಇಬ್ಬರೂ ಒಂದೇ ಮನೆಯಲ್ಲಿರುವ ಪ್ರಸಂಗ ಬಂದಿತ್ತು. ಅದರಿಂದ ಅವರಲ್ಲಿ ಆತ್ಮೀಯಭಾವವು ನೆಲೆಗೊಳ್ಳಲಾರಂಭಿಸಿತು. ಅದರಿಂದ ಕೆಲ ದಿನಗಳಲ್ಲೇ ಅವಳು ಚಂದ್ರಕಾಂತನ ಎದುರಿಗೆ ಕುಳಿತು, ಅವನಿಗೆ ಊಟ ಬಡಿಸಹತ್ತಿದಳು. ಮಮತೆಯ ಮಾತೃವಿನಂತೆ ಅವನ ಯೋಗ

ಕ್ಷೇಮವನ್ನು ವಿಚಾರಿಸತೊಡಗಿದಳು. ಚಂದ್ರಕಾಂತನಿಗೆ ತನ್ನ ತಾಯಿಯ ನೆನಪೇ ಇರಲಿಲ್ಲ. ಶೈಶವಾವಸ್ಥೆಯಲ್ಲೇ ಮಾತೃವಿಯೋಗ ತಾಳಿದ್ದ ಆತನು, ತಂದೆಯಿಂದಲೇ ಲಾಲಿತ-ಪಾಲಿತನಾಗಿದ್ದನು. ತಂದೆಯು ಆತನನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರೂ, ತಾಯಿಯ ಕೋಮಲ ವಾತ್ಸಲ್ಯವು ಚಂದ್ರಕಾಂತನಿಗೆ ಪರಿಚಿತವಾಗಿರಲಿಲ್ಲ. ಹರಭಟ್ಟನ ಮನೆಯ ಆ ತರುಣ ವಿಧವೆಯ ಸ್ನೇಹದಿಂದ ಅದು ಅವನಿಗೆ ಅನುಭವವಾಗಹತ್ತಿತು. ಇಷ್ಟೇ ಅಲ್ಲ, ತನ್ನ ಪ್ರೀತಿಯ ತಂದೆಯ ಮರಣದಿಂದ ಚಂದ್ರಕಾಂತನ ಹೃದಯಕ್ಕೆ ಹತ್ತಿದ್ದ ಧಕ್ಕೆಯೂ ಆಕೆಯ ಆ ಸ್ನೇಹದಿಂದ ಕಡಿಮೆಯಾಗಲಾರಂಭಿಸಿತು.

ಚಂದ್ರಕಾಂತನು ಒಂದು ದಿನ ಹರಭಟ್ಟನನ್ನು ಕುರಿತು ಸಹಜ ರೀತಿಯಿಂದ:—ಭಟ್ಟರೆ, ನಿಮಗೆ ಹೆಂಡತಿ-ಮಕ್ಕಳಾರೂ ಇಲ್ಲೆಂಬದನ್ನು ನಾನು ಬಲ್ಲೆನು; ಆದರೆ ನಿಮ್ಮ ಮನೆಯಲ್ಲಿರುವವಳು ಯಾರು? ನಿಮಗೆ ಏನಾಗಬೇಕು? ಎಂದು ಕೇಳಿದನು.

ಹರಭಟ್ಟ:—ಇವಳೊಬ್ಬ ಅಡಿಗೆಯವಳು.

"ಇವಳು ನಿಮಗೇನಾದರೂ ಆಪ್ತಳಾಗಬೇಕೇ?"

"ಛೇ-ಛೇ ಏನೂ ಸಂಬಂಧವಿಲ್ಲ"

"ಹಾಗಾದರೆ, ನೀವು ಇವಳನ್ನು ಎಲ್ಲಿಂದ ಕರೆತಂದಿರಿ?"

ಅದಕ್ಕೆ ಹರಿಭಟ್ಟನು ಹೇಳಿದನೇನಂದರೆ:—ಅದೊಂದು ರಾಮಾಯಣ-ಭಾರತದಂತಹ ದೊಡ್ಡ ಕಥೆಯೇ ಆಗಿದೆ. ಆದರೂ ನಿನಗೆ ಅದನ್ನು ಸಂಕ್ಷೇಪ ರೀತಿಯಿಂದ ತಿಳಿಸುತ್ತೇನೆ, ಕೇಳು: ಮೂರು-ನಾಲ್ಕು ವರ್ಷಗಳ ಹಿಂದೆ ಇವಳು ತನ್ನ ಗಂಡ ಹಾಗು ಮಗಳೊಡನೆ ತೀರ್ಥ-ಯಾತ್ರೆಗೆಂದು ಬಂದಳು. ಈ ಕಾಶೀಕ್ಷೇತ್ರದಲ್ಲಿಯೇ ಈಕೆಯ ಗಂಡನ ನಿಧನವಾಯಿತು. ತಮ್ಮ ದೇಶದಲ್ಲಿ ಅಂಥ ಸಮೀಪದ ಆತ್ಮೀಯರಾರೂ ಇರದ್ದರಿಂದ, ಇವಳು ಅತ್ತ ಮರಳಿ ಹೋಗಲಿಲ್ಲ. ಮಣಿಕರ್ಣಿಕಾ ಘಾಟಿನ ಬಳಿಯಲ್ಲಿ ಭಿಕ್ಷೆ ಬೇಡಿ ಜೀವಿಸುತ್ತಿದ್ದಳು. ನನ್ನ ಮನೆಗೆ ಕರೆತಂದು, ನಾನು ಇವಳಿಗೆ ಆಶ್ರಯವನ್ನಿತ್ತಿರುತ್ತೇನೆ.

"ಇವಳು ಯಾವ ಊರವಳೆಂಬವನ್ನಾದರೂ ಬಲ್ಲಿರಾ?"

"ಚೆನ್ನಾಗಿ ಗೊತ್ತಿಲ್ಲ; ಆದರೂ ಗೋದಾವರಿಯ ಆಚೆಗಿರುವ ಕರ್ನಾಟಕ ದೇಶದವಳೆಂದು ತಿಳಿಯುತ್ತದೆ"

## ३ನೇ ತರಂಗ:—ದಾಸಿಯನ್ನು ದಾಸಿಯಾಗಿಯೇ ಇರಗೊಡಿರಿ.

ಮುಂದೆ ಒಂದೆರಡು ದಿನಗಳ ನಂತರ ಊಟಕ್ಕೆ ಕುಳಿತಾಗ ಚಂದ್ರಕಾಂತನು ಆ ತರುಣಿಯನ್ನು ಕುರಿತು ಮೆಲ್ಲನೆ ಕೇಳುತ್ತಾನೆ:—ತಮ್ಮ ಊರು ಯಾವದು? ತಾವು ಯಾವ ಜನಗಳು?

ಆ ಪ್ರಶ್ನೆಯನ್ನು ಕೇಳಿ, ಆ ವಿಧವೆಯ ಮುಖವು ಕಪ್ಪಿಟ್ಟಿತು. ಅವಳು ಚಂದ್ರಕಾಂತನ ಇಂಗಿತವನ್ನು ತಿಳಿದಳು; ಆದರೂ ಆ ಪ್ರಶ್ನೆಯನ್ನು ಕೇಳಿಯೂ ಕೇಳಿಸದಂತೆ ನಟಿಸಿ, ಒಮ್ಮೆಲೆ ಎದ್ದು ನಿಂತು, 'ಊಟ ಮಾಡಿರಿ; ಒಳಗಿರುವ ಹಾಲು ತರುತ್ತೇನೆ.' ಎಂದವಳೇ ಅಲ್ಲಿಂದ ಕಾಲ್ದೆಗೆದಳು.

ಹಾಲಿಗಾಗಿ ಅಷ್ಟೊಂದು ಅವಸರವಿರಲಿಲ್ಲ. ಚಂದ್ರಕಾಂತನಿಗೆ ಉತ್ತರವೇನು ಕೊಡಬೇಕೆಂಬದನ್ನು ತಿಳಿಯಲಾರದೆ ಅವಳು ಅಷ್ಟು ಅವಸರದಿಂದ ಅಡುಗೆಯ ಮನೆಯನ್ನು ಸೇರಿದಳು. ತಾಯಿಗೆ ಹಾಲುಬೇಕೆಂಬುದನ್ನು ಕೇಳಿ ತಿಳಿದ ಶಾರದೆಯು-ಆ ತರುಣ ವಿಧವೆಯ ಮಗಳು-ಹಾಲಿನ ಕುಣಿಯೊಳಗಿಂದ ಹಾಲು ತೆಗೆಯುತ್ತಿದ್ದಳು; ಅದರಿಂದ ಶಾರದೆಯ ಲಕ್ಷ್ಯವು ತಾಯಿಯ ಕಪ್ಪಿಟ್ಟ ಮುಖದ ಕಡೆಗೆ ಹೋಗಲಿಲ್ಲ. ಆಕೆಯು ಸುರುವಿಕೊಟ್ಟ ಹಾಲಿನ ಪಾತ್ರೆಯನ್ನು ತಕ್ಕೊಂಡು, ಆ ವಿಧವೆಯು ತನ್ನ ಮಗಳ ಮೋರೆಯನ್ನು ಒಂದು ವಿಶೇಷ ಪ್ರಕಾರದ ನೋಟದಿಂದ ದೃಷ್ಟಿಸಿ, ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಾಳೆ:—ಎಲೈ ದಯಾಳುವೇ, ಜಗದ್ರಕ್ಷಕಾ, ಸರ್ವಾಂತರ್ಯಾಮಿಯಾದ ಜಗದೀಶಾ! ನೀನು ನನ್ನನ್ನು ಕ್ಷಮಿಸು. ಬಳಿಕ ಅವಳು ಆ ಹಾಲಿನ ಬಟ್ಟಲನ್ನು ತಕ್ಕೊಂಡು ಬಂದು ಅನಿರ್ವಾಹಕ್ಕಾಗಿ ಚಂದ್ರಕಾಂತನ ಬಳಿಯಲ್ಲಿ ಕುಳಿತಳು. ಚಂದ್ರಕಾಂತನು ಆಕೆಗೆ ಮತ್ತೆ ಅದೇ ಪ್ರಶ್ನೆ ಮಾಡಿದನು.

ಆಕೆಯಿಂದ ಎಲ್ಲ ಸಂಗತಿಯನ್ನು ತಿಳಕೊಂಡ ಬಳಿಕ ಚಂದ್ರಕಾಂತನು ಕಟ್ಟಕಡೆಗೆ ಆಕೆಯನ್ನು ಕುರಿತು:—ಹಾಗಾದರೆ ನೀವು ನಿಮ್ಮ ಊರಿಗೆ ತಿರುಗಿ ಹೋಗುವದಿಲ್ಲೇಕೆ?

"ಅಲ್ಲಿ ನಮ್ಮ ಉದರನಿರ್ವಾಹ ಸಾಗುವಂತಿರುವದಿಲ್ಲ."

ಆ ವಿಧವೆಯ ಕರುಣಾಜನ್ಯ ಸಂಗತಿಯನ್ನು ಕೇಳಿ, ಕೆಲ ಕ್ಷಣಗಳ ನಂತರ ಕೆಳಮೋರೆಯಿಂದಲೇ ಚಂದ್ರಕಾಂತನು ಮತ್ತೆ ಆಕೆಯನ್ನು:—ಹಾಗಾದರೆ ನೀವು ನಿಮ್ಮ ಈ ಮಗಳ ಲಗ್ನ ಮಾಡುವದೆಂತು?

ಆ ವಿಧವೆಯು ನಿಟ್ಟುಸಿರಬಿಡುತ್ತ ನಿರಾಶೆಯ ದನಿಯಿಂದ:—"ದೇವರೇ ಬಲ್ಲನು!" ಎಂದಂದಳು.

ಚಂದ್ರಕಾಂತನ ಊಟವು ಮುಗಿಯಿತು. ಬಳಿಕ ಅವನು ಅನ್ನುತ್ತಾನೆ:—ನಾನು ನಿಮ್ಮ ಮಗಳನ್ನು ಇದುವರೆಗೂ ಚೆನ್ನಾಗಿ ದಿಟ್ಟಿಸಿ ನೋಡಿರುವದಿಲ್ಲ. ಹರಭಟ್ಟರಂತೂ ನಿಮ್ಮ ಕನ್ಯೆಯು ಒಳ್ಳೇ ಸುಂದರಿಯೂ, ಶಾಂತಳೂ, ಯೋಗ್ಯಳೂ ಆಗಿರುವಳೆನ್ನುತ್ತಿರುತ್ತಾರೆ. ಅವಳನ್ನು ನನಗೆ ತೋರಿಸುವಿರಾ? ನೋಡಬಹುದೇ?

ಮುಗುಳು ನಗೆಯಿಂದ ಆ ವಿಧವೆಯು:—ನಾನಂತೂ ಆಕೆಯನ್ನು ಹಡೆದ ತಾಯಿಯು. "ಹೆತ್ತವರಿಗೆ ಹೆಗ್ಗಣವೇ ಮುದ್ದು!" ಎಂಬುವಂತೆ ನನಗಂತೂ ನನ್ನ ಮಗಳು ತ್ರಿಭುವನ ಸುಂದರಿಯೂ, ಸದ್ಗುಣ ಸಂಪನ್ನೆಯೂ ಆಗಿ ತೋರುವಳು. ನನ್ನ ಮಗಳ ವಿಷಯದ ನನ್ನ ಮಾತಿನ ವಿಶ್ವಾಸವನ್ನು ಇತರರು ತಾಳುವದೆಂತು? ಆದರೂ ನಾನು ನಿಮಗೆ ತಿಳಿಸಿಬಿಡುತ್ತೇನೆ, ನನ್ನ ಮಗಳು ಕುರೂಪಿಯೂ ಕುತ್ಸಿತಳೂ ಆಗಿರುವದಿಲ್ಲ. ಈ ಕಾಶಿಯೊಳಗಿನ ಈಕೆಯ ವಯಸ್ಸಿನ ಹುಡುಗೆಯರಲ್ಲಿ ಈಕೆಯಷ್ಟು ಚಲುವೆಯಾಗಲಿ, ಗುಣಪೂರ್ಣಳಾಗಲಿ ಬೇರೊಬ್ಬಳಿಲ್ಲೆಂದು ನಾನು ದಿಟವಾಗಿ ಹೇಳಬಲ್ಲೆನು.

ಮತ್ತೆ ಮೂರು-ನಾಲ್ಕು ದಿನಗಳ ನಂತರ ಒಂದು ದಿನ ಬೆಳಿಗ್ಗೆ ಚಂದ್ರಕಾಂತನು ಶಾರದೆಯನ್ನು ಚೆನ್ನಾಗಿ ನಿರೀಕ್ಷಿಸಿದನು. ಈ ಲೋಕದಲ್ಲಿ ಇವಳಷ್ಟು ಸುಂದರಿಯು ಅನ್ಯಳಿಲ್ಲೆಂದು ಆತನ ಮನವರಿಕೆಯಾಯಿತು. ಆಗ ಶಾರದೆಯು ಅಡುಗೆಯ ಮನೆಯಲ್ಲಿ ಕಾಯಿ-ಪಲ್ಲೆಯನ್ನು ಹೆಚ್ಚುತ್ತಿದ್ದಳು. ಅಲ್ಲಿ ಬೇರೆ ಯಾರೂ ಇರಲಿಲ್ಲ. ಆಕೆಯ ತಾಯಿಯು ಆಗ ಗಂಗಾಸ್ನಾನಕ್ಕೆಂದು ಭಾಗಿರಥೀ ಹೊಳೆಗೆ ಹೋಗಿದ್ದಳು. ಹರಭಟ್ಟನು ತನ್ನ ನಿತ್ಯಕ್ರಮದಂತೆ ಹೊಸ ಯಾತ್ರಿಕರ ಸಂಧಾನಕ್ಕಾಗಿ ರೇಲ್ವೆ ಸ್ಟೇಶನ್ನಿಗೆ ತೆರಳಿದ್ದನು.

ಚಂದ್ರಕಾಂತನು ಶಾರದೆಯ ಸಮೀಪಕ್ಕೆ ಹೋಗಿ ನಿಂತುಕೊಂಡು: ಶಾರದೆ, ಎಂದು ಕರೆದನು.

ಕೆಲಸದಲ್ಲಿ ತೊಡಗಿದ್ದ ಶಾರದೆಯು ಆಕಸ್ಮಿಕವಾಗಿ ತನ್ನೆದುರಿಗೆ ಬಂದು ನಿಂತ ಚಂದ್ರಕಾಂತನನ್ನು ಕಂಡು ಬೆಚ್ಚಿಬಿದ್ದಳು! ಆದರೂ ಅವಳು ಅಂಜದೆ ಮೃದುಮಧುರಸ್ವರದಿಂದ ಅಪ್ಪಣೆಯೇನೆಂದು ಕೇಳಿದಳು.

"ನಿನಗೆ ಅಡುಗೆ ಮಾಡಲಿಕ್ಕೆ ಬರುವದೇ?"

ಸಮ್ಮತಿಸೂಚಕವಾದ ಗೋಣು ಅಲ್ಲಾಡಿಸುತ್ತ ಶಾರದೆಯು:—ತಕ್ಕ ಮಟ್ಟಿಗೆ ಬರುತ್ತದೆ.

"ಏನೇನು ಅಡಿಗೆ ಮಾಡಲಿಕ್ಕೆ ಕಲಿತಿರುತ್ತೀ?"

ಪಿಟ್ಟೆಂದುಸುರವೆ ಶಾರದೆಯು ನಿಂತುಬಿಟ್ಟಳು. ಉತ್ತರವೇನು ಕೊಡ ಬೇಕೆಂಬದು ಆಕೆಗೆ ತಿಳಿಯಲೊಲ್ಲದು.

ಚಂದ್ರಕಾಂತನಿಗೆ ಅವಳ ಮನೋಭಾವನೆಯು ವಿದಿತವಾಯಿತು. ಆದ್ದರಿಂದಲೇ ಅವನು ಆ ಮಾತನ್ನು ಬಿಟ್ಟು ಮತ್ತೆ:—ನೀನೂ ನಿನ್ನ ತಾಯಿಯೂ ಇಬ್ಬರೂ ಇಲ್ಲಿ ಕೆಲಸಕ್ಕಿರುತ್ತೀರೇನು? ಎಂದು ಪ್ರಶ್ನೆ ಮಾಡಲು,

"ಅಹುದು; ನಾವಿಬ್ಬರೂ ಕೆಲಸ ಮಾಡುತ್ತಿರುತ್ತೇವೆ."

"ನಿನಗೆ ತಿಂಗಳಿಗೇನು ಸಂಬಳ?"

"ನನ್ನ ತಾಯಿಗಷ್ಟೇ ಸಂಬಳ ಸಿಗುವದು; ನನಗೆ ಸಿಗುವದಿಲ್ಲ. ನಾನು ನನ್ನ ಹೊಟ್ಟೆಯ ಕೂಳಿಗಾಗಿ ಇಲ್ಲಿ ದುಡಿಯುತ್ತಿರುತ್ತೇನೆ."

"ಬರಿಯ ಹೊಟ್ಟೇ ಕೂಳಿಗಾಗಿಯೇ ಇಲ್ಲಿ ನೀನು ದುಡಿಯುತ್ತಿರುವೆಯಾ?"

ಶಾರದೆಯು ಸಮ್ಮತಿ ಸೂಚಕವಾದ ಗೋಣನ್ನಲ್ಲಾಡಿಸಿದಳು ಮಾತ್ರ.

"ನಾನು ನಿನಗೆ ಊಟಕ್ಕೆ ಹಾಕಿದರೆ, ನೀನು ನನ್ನ ಕೆಲಸವನ್ನು ಮಾಡುತ್ತೀಯೇನು?"

"ಈ ಬಗ್ಗೆ ನಾನು ಉತ್ತರ ಕೊಡಲಾರೆನು. ನನ್ನ ತಾಯಿಯನ್ನು ಕೇಳಿಕೊಳ್ಳಿರಿ."

"ಹಾಗೆಯೇ ಆಗಲೆ"ಂದು ಹೇಳಿ ಚಂದ್ರಕಾಂತನು ಅಲ್ಲಿಂದ ಹೊರಟು ಹೋದನು.

ಮರುದಿವಸ ಚಂದ್ರಕಾಂತನು ಹರಭಟ್ಟನಿಗೆ ಏನೇನೋ ಕೆಲವು ಪ್ರಶ್ನೆಗಳನ್ನು ಕೇಳಿದ ನಂತರ, ತನ್ನ ಊರಿಗೆ ತನ್ನ ಮನೆಯ ವಹಿವಾಟದಾರನಿಗೆ ಹೀಗೆಂದು ಕಾಗದ ಬರೆದನು:—

"ನಾನು ಕಾಶಿಯಲ್ಲಿರುತ್ತೇನೆ. ಇಲ್ಲಿ ಇದೇ ತಿಂಗಳಲ್ಲಿ ನಾನು ಲಗ್ನವಾಗುವದನ್ನು ನಿಶ್ಚಯಿಸಿರುತ್ತೇನೆ. ಮಾವನವರಿಗೆ ಈ ಸಂಗತಿಯನ್ನು ತಿಳಿಸಿ, ಸಾಕಷ್ಟು ದುಡ್ಡು, ಅಲಂಕಾರ ಹಾಗು ಪ್ರಯೋಜನೀಯ ಸಾಮಾನುಗಳನ್ನು ತಕ್ಕೊಂಡು ಅವರೊಡನೆ ಇಲ್ಲಿಗೆ ಬೇಗನೆ ಹೊರಟು ಬರ್ರಿ."

ಮುಂದೆ ಒಂದೆರಡು ವಾರಗಳಲ್ಲೇ ಚಂದ್ರಕಾಂತನು ಹರಭಟ್ಟನ ಮನೆಯ ಆ ಅಡಿಗೆಯ ತರುಣ ವಿಧವೆಯ ಮಗಳಾದ ಆ ಶಾರದೆಯನ್ನು ಲಗ್ನವಾದನು.

ಮತ್ತೆ ಕೆಲ ದಿನಗಳ ನಂತರ ಚಂದ್ರಕಾಂತನು ನವವಧುವಿನೊಡನೆ ತನ್ನ ಊರಿಗೆ ಪ್ರಯಾಣ ಬೆಳಿಸುವ ಸಮಯವು ಪ್ರಾಪ್ತವಾಯಿತು. ಆಗ ಶಾರದೆಯು ಅಳುತ್ತ ಗಂಡನನ್ನು ಕುರಿತು:—ಕಾಂತರೇ, ಇನ್ನು ನನ್ನ ತಾಯಿಯ ಗತಿಯೇನು? ಎಂದು ಕೇಳಿದಳು.

"ಅವಳೂ ನಮ್ಮೊಡನೆ ಬರಲಿ" ಎಂದು ಚಂದ್ರಕಾಂತನು ಹೇಳಿದನು.

ಈ ಸಂಗತಿಯು ಶಾರದೆಯ ತಾಯಿಗೆ ತಿಳಿಯಿತ. ಕೂಡಲೆ ಅವಳು ಶಾರದೆಯನ್ನು ಒತ್ತಟ್ಟಿಗೆ ಕರೆದು:—ತಂಗೀ, ಶಾರದಾ, ನೀನು ನಿನ್ನ ಗಂಡನ ಮನೆಗೆ ಹೋದ ಬಳಿಕ ನಿನಗೆ ಆಗಾಗ್ಗೆ ನನ್ನ ನೆನಪಾದೀತು; ಆದರೆ ನನ್ನನ್ನು ಅಲ್ಲಿಗೆ ಕರೆಯಿಸಿಕೊಳ್ಳುವ ಇಚ್ಛೆಯನ್ನು ಮಾತ್ರ ತಾಳಬೇಡ. ನಾನು ಜೀವದಿಂದಿರುವ ವರೆಗೆ ಈ ಕಾಶೀ ಕ್ಷೇತ್ರವನ್ನು ಬಿಟ್ಟು ಎಲ್ಲಿಗೂ ಬರಲಾರೆನು. ನೋಡುವ ಇಚ್ಛೆಯಾದರೆ, ಇಲ್ಲಿಗೇ ಬಂದು ನನ್ನನ್ನು ನೋಡಿಕೊಂಡು ಹೋಗು; ಅಂದರಾಯಿತು, ಎಂದು ಹೇಳಿದಳು.

ತಾಯಿಯ ಆ ನುಡಿಯನ್ನು ಕೇಳಿ, ಶಾರದೆಯು ಅಳತೊಡಗಿದಳು. ಮಗಳ ಆ ರೋದನವನ್ನು ತಡೆದು, ತಾಯಿಯು ಗಂಭೀರ ಸ್ವರದಿಂದ:— ತಂಗೀ, ಎಲ್ಲವನ್ನೂ ಬಲ್ಲ ನೀನು ಮತ್ತೆ ಅಳಬೇಕೇ?

ಶಾರದೆಯು ಅಳುವದನ್ನು ಬಿಟ್ಟು, ತಾಯಿಯನ್ನು ಬಿಗಿಯಾಗಿ ಅಪ್ಪಿಕೊಂಡು:—ಇಲ್ಲವ್ವಾ, ನಾನಿನ್ನು ಅಳುವದಿಲ್ಲ............

"ತಂಗೀ, ಆದಿರಲಿ. ತಾಯಿಯ ಸಲುವಾಗಿ ಆ ತಾಯಿಯನ್ನೇ ಮರೆತು ಬಿಟ್ಟರೆ, ಅದೇ ನಿಸ್ಸೀಮವಾದ ಮಾತೃಭಕ್ತಿಯವ್ವಾ, ತಿಳಿಯಿತೇ?"

ಕಾಶಿಯಿಂದ ಹೊರಟಾಗ ಚಂದ್ರಕಾಂತನು ಬೇಕಾದಷ್ಟು ಆಗ್ರಹ ಮಾಡಿದರೂ ಆ ವಿಧವೆಯು ಆತನ ಸಂಗಡ ಹೊರಡಲಿಕ್ಕೆ ಒಪ್ಪಲಿಲ್ಲ. ಈ ಕಾಶೀ ಕ್ಷೇತ್ರ ಬಿಟ್ಟು ನಾನು ಎಲ್ಲಿಗೂ ಹೊರಡಲಾರೆನೆಂದು ಅವಳು ಖಂಡ ತುಂಡಾಗಿ ತಿಳಿಸಿಬಿಟ್ಟಳು.

ಕಡೆಗೆ ಚಂದ್ರಕಾಂತನು ಆಕೆಗೆ ತಿಳಿಸಿದನೇನಂದರೆ:—ಕಾಶಿಯನ್ನು ಬಿಟ್ಟು ಬರುವ ಇಚ್ಛೆಯು ನಿನಗಿರದಿದ್ದರೆ ನೀನು ನಮ್ಮಲ್ಲಿಗೆ ಬರಬೇಡ; ಆದರೆ ಇಲ್ಲಿಯ ಈ ದಾಸ್ಯವೃತ್ತಿಯನ್ನು ಬಿಟ್ಟು, ಬೇರೆ ಕಡೆಗಿದ್ದು, ಸ್ವತಂತ್ರವಾಗಿ ಉಪಜೀವಿಸು.

ಆ ವಿಧವೆಯು ಅದಕ್ಕೂ ಒಪ್ಪದೆ:—ಈ ಹರಭಟ್ಟರು ನನ್ನನ್ನು ತಮ್ಮ ಹೊಟ್ಟೆಯ ಮಗಳಂತೆ ಸಾಕಿ ಸಲಹುತ್ತಾರೆ; ಮತ್ತು ಕೇವಲ ನಿರಾಶ್ರಿತ ಸ್ಥಿತಿಯಲ್ಲಿ ನನಗೆ ಆಶ್ರಯ ಕೊಟ್ಟಿರುತ್ತಾರೆ. ನಾನಾದರೂ ಇವ

ರನ್ನು ನನ್ನ ತಂದೆಯಂತೆ ತಿಳಿದಿರುತ್ತೇನೆ. ಆದುದರಿಂದ ನಾನು ಇವರನ್ನು ಬಿಟ್ಟು ಮತ್ತೆಲ್ಲಿಯೂ ಹೋಗಲಾರೆನು, ಎಂದಂದಳು.

ಈ ದುಃಖಿನಿಗೆ ಪರಾವಲಂಬನವು ಬೇಕಾಗಿಲ್ಲ. ಯತ್ನಪೂರ್ವಕವಾಗಿ ಇವಳು ಯಾರ ಉಪಕಾರವನ್ನೂ ಇಚ್ಛಿಸುವದಿಲ್ಲ. ಆದುವರಿಂದ ಇವಳಿಗೆ ಒತ್ತಾಯಪಡಿಸಿ ಪ್ರಯೋಜನವಿಲ್ಲೆಂದು ಬಗೆದು, ಚಂದ್ರಕಾಂತನು ಶಾರದೆ ಯೊಬ್ಬಳೊಡನೆಯೇ ತನ್ನ ಊರಿಗೆ ಹೊರಟು ಹೋದನು.

ಶಾರದೆಯು ಗಂಡನ ಮನೆಗೆ ಬಂದಾಗಿನಿಂದ ವಿಸ್ಮಯಾಶ್ಚರ್ಯಗಳಿಂದ ಬೆರಗಾಗಿದ್ದಳು. ಅಲ್ಲಿಯ ಆ ದೊಡ್ಡ ಮನೆ, ನಾನಾ ಪ್ರಕಾರದ ಗೃಹಾ ಲಂಕಾರ, ದಾಸ ದಾಸಿಯರು ಮುಂತಾದವುಗಳನ್ನು ನೋಡಿ, ಆ ಜನ್ಮ ದರಿದ್ರಿನಿಯು ಅಚ್ಚರಿಪಟ್ಟದ್ದೇನಾಶ್ಚರ್ಯ? ದೇವರ ಅನುಗ್ರಹಕ್ಕಾಗಿ ದೇವ ರನ್ನೂ, ಪತಿಯ ನಿಸ್ಸೀಮ ಪ್ರೇಮಕ್ಕಾಗಿ ಪತಿಯನ್ನೂ ಅವಳು ಹಗಲಿರುಳೂ ಮನದಲ್ಲಿ ಕೊಂಡಾಡಹತ್ತಿದಳು.

ಮುಂದೊಂದು ದಿನ ಚಂದ್ರಕಾಂತನು ಏಕಾಂತದಲ್ಲಿ ಶಾರದೆಯನ್ನು ಕುರಿತು:—ಪ್ರಿಯೇ, ನನ್ನ ಮನೆ ಮಾರುಗಳು ನಿನ್ನ ಮನಸ್ಸಿಗೆ ಬಂದವೇ? ಎಂದು ಕೇಳಲು,

ಶಾರದೆಯು ತೀರ ಲಜ್ಜಿತಳಾಗಿ ಸೆರಗಿನಿಂದ ಮೋರೆಯನ್ನು ಮುಚ್ಚಿ ಕೊಂಡಳು. ಚಂದ್ರಕಾಂತನಿಗೆ ಹೆಂಡತಿಯ ಮನೋಭಾವನ್ನು ತಿಳಿಯ ಬೇಕಾಗಿರಲಿಲ್ಲ; ಆಕೆಯ ಕೋಮಲವಾದ ಕಂಠಸ್ವರವನ್ನು ಕೇಳಬೇಕಾಗಿತ್ತು; ಆದುದರಿಂದ ಅವನು ಮಡದಿಯ ಮೌನಕ್ಕೆ ಸಮ್ಮತಿಸವೆ, ಅವಳ ಮುಖ ವನ್ನು ತನ್ನ ಕರದ್ವಯಗಳಿಂದ ಎತ್ತಿ ಹಿಡಿದು, ಮತ್ತೆ:—ಏನು? ನನ್ನ ಸಿರಿ-ಸಂಪತ್ತುಗಳು ನಿನ್ನ ಮನಸ್ಸಿಗೆ ಬರಲಿಲ್ಲವೆ? ಎಂದು ಆಗ್ರಹಪೂರ್ವಕ ವಾಗಿ ಕೇಳಿದನು.

ನಾಚಿಕೆಯಿಂದ ಶಾರದೆಯ ಮುಖಮಂಡಲವು ಆರಕ್ತವರ್ಣವನ್ನು ಧರಿಸಿತ್ತು. ಅದರಿಂದ ಅವಳ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಆದರೂ ಗಂಡನ ಆಗ್ರಹದ ಮಾತಿಗೆ ಏನಾದರೂ ಉತ್ತರ ಕೊಡದಿರುವಂತಿರದ್ದರಿಂದ ಅವಳು ಮೆಲ್ಲನೆ:—ಇದೆಲ್ಲವೂ ನಮ್ಮ ಅನುಗ್ರಹ! ಎಂದಂದಳು.

ಚಂದ್ರಕಾಂತನು ಮುಗುಳು ನಗೆಯಿಂದ ಪ್ರತಿ ಮಾತನಾಡುತ್ತಾನೆ:— ಛೇ, ಛೇ. ಇದಕ್ಕೆಲ್ಲ ನಿನ್ನ ಅನುಗ್ರಹವೇ ಕಾರಣವೆಂದು ನನ್ನ ದೃಢ ಭಾವನೆಯು.

ಮತ್ತೆ ಎಷ್ಟೋ ದಿನಗಳು ಕಳೆದವು. ಶಾರದೆಯು ಚಂದ್ರಕಾಂತನ ಪ್ರತಿ ಛಾಯಯಂತೆ ಆತನ ಆಜ್ಞಾನುವರ್ತಿನಿಯಾಗಿ ಕಾಲಕ್ರಮಿಸುತ್ತಿದ್ದಳು. ಚಂದ್ರಕಾಂತನ ದೃಢ ಸಹವಾಸದಿಂದ ಆತನ ಇಚ್ಛೆಗಳನ್ನು ಅವನು ಬಾಯಿಂದ ಹೇಳುವ ಮೊದಲೇ ತಿಳಕೊಂಡು, ಅದರಂತೆ ಅವಳು ವರ್ತಿಸುತ್ತಿದ್ದಳು. ಶಾರದೆಯು ಹರಭಟ್ಟನ ಮನೆಯ ಒಬ್ಬ ಸಾಮಾನ್ಯ ದಾಸಿಯಾಗಿದ್ದಳೇನೋ ನಿಜ; ಆದರೆ ಚಂದ್ರಕಾಂತನು ತ್ರಿಲೋಕಗಳಲ್ಲಿ ತಪಗಟ್ಟಿ ಹುಡುಕಿದ್ದರೂ ಅಂಥ ದಾಸಿಯು ದೊರೆಯುತ್ತಿದ್ದಳೊ-ಇಲ್ಲವೋ ತಿಳಿಯದು. ದಾಸಿಯೆಂದು ಚಂದ್ರಕಾಂತನು ಆಕೆಯನ್ನು ವರಿಸಿರಲಿಲ್ಲ; ಪ್ರೀತಿಯ ಮಡದಿಯೆಂದು ವರಿಸಿದ್ದನು. ಶಾರದೆಯು ಬಹು ಪ್ರೇಮಲಳು. ಆಕೆಯ ಭಾಷಣವು ಮಿಷ್ಟವೂ ಮಧುರವೂ ಆಗಿದ್ದಿತು. ಅದರಿಂದ ಆ ದಂಪತಿಗಳಲ್ಲಿಯ ದಾಂಪತ್ಯ ಭಾವವು ದಿನ ದಿನಕ್ಕೆ ಹೆಚ್ಚು ದೃಢವಾಗಹತ್ತಿತು. ಆದರೂ ಶಾರದೆಯು ತಾನು ಚಂದ್ರಕಾಂತನಂತಹ ಶ್ರೀಮಂತ, ಸುವಿದ್ಯಾಸಂಪನ್ನ ಹಾಗು ಉದಾರ ಹೃದಯದ ತರುಣನಿಗೆ ಯೋಗ್ಯ ಹೆಂಡತಿಯಲ್ಲೆಂದೂ ತಾನು ಈತನಲ್ಲಿ ದಾಸ್ಯತ್ವದಿಂದಲೇ ಇರಬೇಕಲ್ಲದೆ, ಮನೆಯ ಒಡತಿಯೆಂಬ ಭಾವವನ್ನು ತೋರ್ಪಡಿಸಬಾರದೆಂದೂ ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ದಾಸ್ಯಭಾವ ದಿಂದಲೇ ವರ್ತಿಸುತ್ತಿದ್ದಳು; ಆದರೆ ಇದರಿಂದ ದಾಂಪತ್ಯದ ಶ್ರೇಷ್ಠತರದ ಮೂಲನಕ್ಕೆ ಆತಂಕವಾಗುವದು ಸ್ವಾಭಾವಿಕವೇ ಸರಿ. ಶಾರದೆಯಲ್ಲಿಯ ಸಂಕೋಚವೃತ್ತಿಯು ಅಳಿಯದ್ದರಿಂದ, ಅವರಿಬ್ಬರಲ್ಲಿ ಸಮಾನಭಾವವು ನೆಲೆಗೊಳ್ಳಲಿಲ್ಲ. ಚಂದ್ರಕಾಂತನು ಈ ವಿಷಯವಾಗಿ ಶಾರದೆಯನ್ನು ಕುರಿತು ಒಂದು ದಿನ ಹೀಗೆ ಅನ್ನುತ್ತಾನೆ:—ಪ್ರಿಯೇ, ನೀನು ನನ್ನೊಡನೆ ಇಷ್ಟು ಭಯದಿಂದಲೂ ಸಂಕೋಚದಿಂದಲೂ ಏಕೆ ವರ್ತಿಸುತ್ತೀ? ನಾನು ನಿನ್ನೊಡನೆ ದುರ್ವ್ಯವಹಾರ ಮಾಡುತ್ತಿರುವೆನೆಂದು ನಿನ್ನ ಭಾವನೆಯಾಗಿದೆಯೇ ಏನು?

"ಈ ಪ್ರಶ್ನೆಯ ಉತ್ತರವು ನಿಮಗೆ ಗೊತ್ತಿಲ್ಲವೆ?" ಎಂದು ಶಾರದೆಯು ಮನಸ್ಸಿನಲ್ಲಿಯೇ ಅಂದುಕೊಂಡು, ಬಳಿಕ ಬಹಿರಂಗವಾಗಿ:—ನೀವು ದೇವರು, ಸರ್ವಶ್ರೇಷ್ಠರು, ಮಹಾ ವಿದ್ವಾಂಸರು; ಆದರೆ ನಾನು? ನಾನೊಬ್ಬ ದೀನ ದರಿದ್ರಳು! ನೀವು ಪ್ರತಿಪಾಲಕರು; ನಾನು ನಿಮ್ಮ ಆಶ್ರಿತಳು. ನೀವು ದಾತೃಗಳು. ನಾನು ಭಿಕ್ಷುಕಿ! ಎಂದಳು.

ಶಾರದೆಯ ಹೃದಯವು ಚಂದ್ರಕಾಂತನ ವಿಷಯದ ಕೃತಜ್ಞತೆಯಿಂದ ತುಂಬಿ ಹೋಗಿತ್ತು. ಆದರಿಂದ ಅವಳಲ್ಲಿಯ ಪ್ರೇಮವು ತಲೆ ಎತ್ತುವಂತಿ ರಲಿಲ್ಲ. ಅದು ಗುಪ್ತಗಾಮಿನಿಯಾದ ನದಿಯಂತೆ ನಿಶ್ಶಬ್ದವಾಗಿ ಹರಿದು

ಮುಂದರಿಯುತ್ತಿದ್ದಿತೇ ಹೊರತು, ಖಳ ಖಳ ಎಂದು ಶಬ್ದಗೆಯ್ಯು ಭೋರ್ಗಟ್ಟಿ ಹರಿಯುವ ಹಳ್ಳದಂತೆ ವ್ಯಕ್ತವಾಗಿರಲಿಲ್ಲ; ಆದರೆ ಅವಳ ಆ ಸುಕೋಮಲ-ಸುಮಧುರ ಪ್ರೇಮದ ಅವಿಚ್ಛಿನ್ನ ಮಂದಪ್ರವಾಹವು ಸಿರಿ-ಸಂಪತ್ತುಗಳಿಂದಲೂ, ಭರತಾರುಣ್ಯದಿಂದಲೂ, ವಿದ್ಯಾಸಂಪನ್ನತೆಯಿಂದಲೂ ಮದವೇರಿದ ಚಂದ್ರ ಕಾಂತನಿಗೆ ಗೋಚರವಾಗಲಿಲ್ಲ. ಅದರಿಂದ ಅವನು ಆಕೆಯ ವಿಷಯದಲ್ಲಿ ಕ್ರಮೇಣ ಅನಾದರ ತಾಳಲಾರಂಭಿಸಿದನು. ಹೀಗೆ ಅವನು ಒಂದು ದಿನ ಅವಳಲ್ಲಿ ಅನಾದರ ತಾಳಿ ನುಡಿಯಲು, ಶಾರದೆಯ ಕಣ್ಣೊಳಗಿಂದ ಒಮ್ಮೆಲೆ ಅಶ್ರುಬಿಂದುಗಳು ಚಿಮುಕಿಸತೊಡಗಿದವು. ಆ ಆಕಸ್ಮಿಕ ನೇತ್ರಬಿಂದುಗಳ ದರ್ಶನದಿಂದ ಚಂದ್ರಕಾಂತನಲ್ಲಿಯ ಶಾರದೆಯ ವಿಷಯದ ಪ್ರೇಮಾದರಗಳು ಉಚ್ಛೃಂಖಲಗೊಂಡವು. ಅದರಿಂದ ಅವನು ಅವಳನ್ನು ಜಗ್ಗಿಕೊಂಡು ಚುಂಬಿಸಲು, ಅವಳು ಹೃದಯ ಕಾತರತೆಯಿಂದ ಅವನ ಹೃದಯದ ಮೇಲೆ ತನ್ನ ಮುಖವನ್ನಿಟ್ಟು ನೀರವವಾಗಿ ಬಿದ್ದುಕೊಂಡಳು. ಆಗ ಚಂದ್ರ ಕಾಂತನು:—"ಪ್ರಿಯೇ, ನೀನು ಇನ್ನೂ ನಿನ್ನ ಮನದ ಮುಗುಡವನ್ನು ಬಿಡ ಲಾರೆಯಾ? ನೀನು ಇನ್ನೂ ದೀನದರಿದ್ರಳೇ ಆಗಿರುವೆಯೇನು? ಕಣ್ಣು ತೆರೆದು ನೋಡು; ನೀನು ಈಗ ಯಾರ ಸಹಧರ್ಮಿಣಿಯಾಗಿರುವೆಯೆಂಬವ ನ್ನಾದರೂ ತಿಳಿದು ನೋಡು........"

ಆ ವಾಕ್ಯವನ್ನು ಕೇಳಿ, ಆತನ ವಿಷಯದಲ್ಲಿ ಮೊದಲೇ ಕೃತಜ್ಞಳಾ ಗಿದ್ದ ಶಾರದೆಯು, ಮತ್ತಿಷ್ಟು ಕೃತಜ್ಞತೆಯಿಂದ ಪುಲುಕಿತಳಾದಳು. ಅದ ರಿಂದ ಕೆಲಕ್ಷಣಗಳ ವರೆಗೆ ಅವಳ ಬಾಯಿಂದ ಶಬ್ದಗಳೇ ಹೊರಡದಾದವು. ನಂತರ ಅವಳು ಏನೋ ಮಾತಾಡಬೇಕೆನ್ನುವಷ್ಟರಲ್ಲಿ ಚಂದ್ರಕಾಂತನೇ ಮತ್ತೆ:—ಪ್ರಿಯೇ, ಶಾರದೆ, ನಿನ್ನ ಹೃದಯವು ಯಾವಾಗಲೂ ಭಯದಿಂದ ಕಂಪಿಸುತ್ತಿರುವಂತೆ ತೋರುತ್ತಿದೆ; ಆದರೆ ನೀನು ನಿನ್ನ ಆ ಕಲ್ಪಿತ ಭಾವನೆ ಯನ್ನು ತೊರೆದು, ನನ್ನ ಮುಖವನ್ನು ಒಮ್ಮೆಯಾದರೂ ದಿಟ್ಟಿಸಿ ನೋಡು. ಅಂದರೆ ನಿನಗೆ ನನ್ನ ಹೃದಯದೊಳಗಿನ ನಿನ್ನ ವಿಷಯದ ಅಶಾಂತಿಯೇ ಕಂಡೀತಲ್ಲದೆ, ನನ್ನನ್ನು ನೋಡಿ ಅಂಜುವ ಕಾರಣವಿಲ್ಲೆಂಬದು ದೃಗ್ಗೋಚರ ವಾಗದಿರದು. ನೀನು ಈಗ ಹೇಗೂ ನನ್ನ ಹೃದಯದ ಮೇಲೆಯೇ ಬಿದ್ದು ಕೊಂಡಿರುತ್ತೀ. ಅಂದಮೇಲೆ ನನ್ನ ಹೃದಯದ ವ್ಯಾಪಾರವು ನಿನಗೆ ಈಗ ಚೆನ್ನಾಗಿ ಗೋಚರವಾಗಲೇಬೇಕು. ಪ್ರಿಯೇ, ಇಷ್ಟು ದಿನಗಳಾದರೂ ನಿನಗೆ ನನ್ನ ಸ್ವಭಾವದ ಪರಿಚಯವಾಗಬಾರದೇ?

ಆಗ ಶಾರದೆಯು ಆತನ ಚರಣಗಳನ್ನು ಮನದಲ್ಲಿ ಸ್ಮರಿಸುತ್ತ:— ಪ್ರಿಯರೇ, ನಾನು ತಮ್ಮ ಚರಣಗಳ ದಾಸಿಯು. ಈ ದಾಸಿಯನ್ನು ಕಡೆಯತನಕ ದಾಸಿಯನ್ನಾಗಿಯೇ ಇರಗೊಡಿರಿ. ಇಷ್ಟೇ ನನ್ನ ಪ್ರಾರ್ಥನೆಯು, ಎಂದು ಅಂದಳು.

---

## ೩ನೇ ತರಂಗ:—**ಮುಂದೆ ಗೊತ್ತಾಗುವದು.**

ಚಂದ್ರಕಾಂತನು ಶಾರದೆಯನ್ನು ಲಗ್ನವಾಗಿ ಮರಳಿ ಬಂದಂದಿನಿಂದ ಚಂದ್ರಕಾಂತನ ಸೋದರತ್ತೆಯಾದ ಶಶಿಮುಖಿಗೆ ಸ್ವಲ್ಪವೂ ಸಮಾಧಾನ ಇರಲಿಲ್ಲ. ದೇವರು ಅವಳಲ್ಲಿ ಅಷ್ಟು ಅಸಮ ಭಾವವನ್ನು ಏಕೆ ನೆಲೆಸಿದ್ದನೋ ತಿಳಿಯದು! ಈ ಕಂಟಕ ಪೂರ್ಣವಾದ ಸಂಸಾರಾಟವಿಯಲ್ಲಿ ಎಲ್ಲ ಪ್ರಾಣಿಗಳೂ ಹೆಚ್ಚು ಕಡಿಮೆ ಮಾನದಿಂದ ದುಃಖಿಗಳಾಗಿ, ನಿಜ ಮಾರ್ಗವನ್ನು ಹುಡುಕಿ, ಆ ಕಟ್ಟಡವಿಯಿಂದ ಪಾರಾಗಿ ಸೌಖ್ಯವನ್ನು ಹೊಂದಬೇಕೆಂದು ಇಚ್ಛೈ ತಾಳಿರುತ್ತಾರೆ; ಆದರೆ ಆ ಮಾರ್ಗವು ಕೆಲವರಿಗೆ ಸಿಗುತ್ತದೆ; ಬೇರೆ ಕೆಲವರಿಗೆ ಎಷ್ಟು ಹುಡುಕಿದರೂ ಸಿಗುವದೇ ಇಲ್ಲ. ಶಶಿಮುಖಿಯಾದರೂ ಬಹು ದಿನಗಳಿಂದ ಈ ಸಂಸಾರಾಟವಿಯಲ್ಲಿ ಒಳಹಾದಿಯನ್ನು ಹುಡುಕುತ್ತಿದ್ದಳು; ಬಹು ದಿನಗಳಾದ ನಂತರ, ಅಂದರೆ ಚಂದ್ರಕಾಂತನ ತಂದೆಯ ಮರಣದ ನಂತರ ಅವಳಿಗೊಂದು ಸೀಳ ದಾರಿಯು ಕಂಡಿತು. ಅವಳು ಆ ದಾರಿಯನ್ನು ಹಿಡಿದು ಕೆಲ ಮಾರ್ಗವನ್ನು ಕ್ರಮಿಸುವಷ್ಟರಲ್ಲೇ, ಚಂದ್ರಕಾಂತನ ಆ ಆಕಸ್ಮಿಕ ವಿವಾಹ, ಆತನ ನವ ವಧುವಾದ ಶಾರದಾ ಸುಂದರಿ, ಆ ಪತಿ-ಪತ್ನಿಗಳಲ್ಲಿಯ ನಿಸ್ಸೀಮವಾದ ದಾಂಪತ್ಯ ಪ್ರೇಮ, ಶಾರದೆಯ ಸದ್ಗುಣ ಪೂರ್ಣ ಆಚರಣೆ ಇವೆಲ್ಲ ಕಲ್ಲು-ಮುಳ್ಳುಗಳು ಅವಳಿಗೆ ಆತಂಕವಾದವು. ಶಶಿಮುಖಿಯ ಅಣ್ಣನ ಹತ್ತು ವರ್ಷದ ಬಾಲಿಕೆಯೊಬ್ಬಳು ಲಗ್ನವಾಗತಕ್ಕವಳಿದ್ದಳು. ಅವಳನ್ನೇ ಚಂದ್ರಕಾಂತನಿಗೆ ಮಾಡಿಕೊಂಡು, ಆತನ ಮನೆಯಲ್ಲಿ ತನ್ನ ಸ್ವಾಮಿತ್ವವನ್ನು ಸರ್ವ ಪ್ರಕಾರದಿಂದಲೂ ಪ್ರಸ್ಥಾಪಿಸಬೇಕೆಂದು ಅವಳು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡಿದ್ದಳು; ಆದರೆ ಈಗ ಅದೆಲ್ಲ ಯೋಚನೆಯು ಕಲ್ಪನೆಯೇ ಆಗಿ ಹೋದುದರಿಂದ, ಶಶಿಮುಖಿಯು ಸುಖ-ಶಾಂತಿಗಳಿಗೆ ನಿರಂತರವಾಗಿ ಎರವಾಗಿಬಿಟ್ಟಿದ್ದಳು.

ಚಂದ್ರಕಾಂತನು ಲಗ್ನವಾಗಿ ಬಂದರೂ ಅವನ ಮನೆಯ ಹಿರಿಯತನವೆಲ್ಲ ಆತನ ಸೋದರತ್ತೆಯಾದ ಶಶಿಮುಖಿಯ ಕಡೆಗೇ ಎಂದಿನಂತೆ

ಅಬಾಧಿತವಾಗಿದ್ದಿತು. ಅವಳ ಗಂಡನೇ-ಚಂದ್ರಕಾಂತನ ಸೋದರಮಾವನೇ-ಆ ಮನೆಯ ಯಜಮಾನನಾಗಿದ್ದನು. ಅವರವರ ಅಧಿಕಾರ-ವ್ಯಾಪಾರಗಳು ಮೊದಲಿನಂತೆ ಅಬಾಧಿತವಾಗಿ ನಡೆದಿದ್ದರೂ, ಆ ಮನೆಯ ನಿಜವಾದ ಸ್ವಾಮಿನಿಯಾದ ಶಾರದೆಯು ಯಾವ ಅಸಂತೋಷ ಇಲ್ಲವೆ ಅಭಿಮಾನಗಳಿಗೂ ಇಂಬುಗೊಡದೆ, ಶಶಿಮುಖಿಗೆ ಕೇವಲ ವಿಧೇಯಳಾಗಿಯೂ, ಆಜ್ಞಾನುವರ್ತಿನಿಯಾಗಿಯೂ ನಡೆಯುತ್ತಿದ್ದರೂ ಶಶಿಮುಖಿಗೆ ಅದರಿಂದ ಸಂತೃಪ್ತಿಯಿರಲಿಲ್ಲ! ನಿಜವಾಗಿ ನೋಡಿದರೆ ಶಶಿಮುಖಿಯು ಚಂದ್ರಕಾಂತನ ಮನೆಗೆ ಯಾವ ಬಗೆಯಿಂದಲೂ ಅಧಿಕಾರಿಣಿಯಾದವಳಲ್ಲ. ಅವಳೊಬ್ಬ ಆತನ ಸಾಮಾನ್ಯ ಪರಿವಾರದವಳು. ಚಂದ್ರಕಾಂತನು ತನ್ನ ಸೋದರಮಾವ-ಸೋದರತ್ತೆಯರಲ್ಲಿ ವಹಿಸಿದ್ದ ವಿಶ್ವಾಸವೇ ಅಲ್ಲಿಯ ಅವಳ ಅಧಿಕಾರಕ್ಕೆ ಅಸ್ತಿತ್ವವಾಗಿತ್ತು.

ಶಾರದೆಯನ್ನು ಕಂಡು ವಲ್ಲಭರಾಯನು ಒಂದು ದಿನ ವಾತ್ಸಲ್ಯದಿಂದ:--ನಮ್ಮ ಚಂದ್ರಕಾಂತನ ಹೆಂಡತಿಯು ಬಹು ಸುಗುಣಿಯಿರುತ್ತಾಳೆ, ಎಂದು ಅನ್ನಲು, ಶಶಿಮುಖಿಯು ಕೆಂಡದಂತಹ ಕಣ್ಣುಗಳಿಂದ ಆತನನ್ನು ನೋಡುತ್ತ:—ಸಾಕುಮಾಡಿರಿ ನಿಮ್ಮ ವಾಚಾಲತನವನ್ನು. ಯಾವ ವಿಷಯಕ್ಕೆ ತಮಗೆ ಎಳ್ಳಷ್ಟೂ ಪರಿಜ್ಞಾನವಿರುವದಿಲ್ಲವೋ, ಆ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಯಾರೂ ವ್ಯಕ್ತಮಾಡಹೋಗಬಾರದು. ನಿಮ್ಮಂಥ ಮುದ್ದರಿಗೆ ಕೊಟ್ಟು ಮದುವೆಮಾಡುವದಕ್ಕಿಂತ, ನನ್ನ ತಂದೆ-ತಾಯಿಗಳು ಕೈಕಾಲು ಕಟ್ಟಿ ಕೆರೆ ಬಾವಿಗಳಲ್ಲಿ ನನ್ನನ್ನು ಚೆಲ್ಲಿಕೊಟ್ಟಿದ್ದರೆ ಬಹು ಚೆನ್ನಾಗಿತ್ತೆಂದು ನಾನು ಭಾವಿಸುತ್ತೇನೆ.

ಇದನ್ನು ಕೇಳಿ ಆ ವೃದ್ಧ ವಲ್ಲಭರಾಯನು ಹೆಂಡತಿಯ ಎದುರಿಗೆ ನಿಲ್ಲಲಾರದೆ ಪಲಾಯನ ಹೇಳಿಸಿದನು

ಶಶಿಮುಖಿಯು ಮೂವತ್ತು ವರ್ಷದ ಮಜಲಿಗೆ ಮುಟ್ಟಿದ್ದಳು. ಆದರೂ ಅವಳು ಹದಿನೈದು ಹದಿನಾರು ವಯಸ್ಸಿನ ಶಾರದೆಯನ್ನು ಯಾವ ಬಗೆಯಿಂದಲೂ ಹೋಲುವಂತಿರಲಿಲ್ಲ. ಶಾರದೆಯ ಸರ್ವಗುಣಸಂಪನ್ನತೆಯನ್ನು ಕಂಡು ಶಶಿಮುಖಿಯು ಮುಗ್ಧಳಾಗಿ ಹೋಗಿದ್ದಳು.

ಶಾರದೆಯು ಮೂರ್ಖಳಾಗಲಿ ಅವಿವೇಕಿಯಾಗಲಿ ಇಲ್ಲೆಂಬುವನ್ನು ಶಶಿಮುಖಿಯು ತಿಳಿದಿದ್ದಳು. ತಾನು ಕೇಳಿದ ಪ್ರಶ್ನೆಗಳಿಗೆಲ್ಲ ಶಾರದೆಯು ಸಮರ್ಪಕವಾದ ಉತ್ತರಗಳನ್ನು ನತಮುಖದಿಂದಲೇ ಹೇಳುತ್ತಿದ್ದುದು ಆಕೆಗೆ ಗೊತ್ತಿತ್ತು; ಆದರೂ ಆಕೆಯು ಶಾರದೆಯೊಡನೆ ಕೂಡಿ ನಡೆಯಲಿಕ್ಕೆ ಪ್ರಯತ್ನಿಸುತ್ತಿದ್ದಿಲ್ಲ. ಶಾರದೆಯು ಜಗಳಗಂಟಳಾಗಲಿ, ಸಿಟ್ಟಿನ ಸ್ವಭಾವ

ದವಳಾಗಲಿ ಆಗಿದ್ದರೆ ಇಲ್ಲಸೆ ಸ್ವಾರ್ಥಗಳೂ, ನಿರ್ದಯಳೂ, ಹಿಂಸಾಪರವಶಳೂ, ದುರಭಿಮಾನಿಯೂ ಆಗಿದ್ದರೆ ಶಶಿಮುಖಿಗೆ ಅವಕೊಡಸೆ ನ್ಯಾಯ ತೆಗೆಯು ಲಿಕ್ಕೆ ಸುಲಭವಾಗುತ್ತಿತ್ತು; ಆದರೆ ಶಾರದೆಯು ಅತ್ಯಂತ ಪ್ರೇಮದಿಂದ ಆವ ಳೊಡನೆ ವ್ಯವಹರಿಸುತ್ತಿದ್ದುದರಿಂದ ಶಶಿಮುಖಿಗೆ ಯಾವ ಬಗೆಯಿಂದಲೂ ಅಂಥ ಅವಕಾಶವೇ ದೊರೆಯದಾಯಿತು. ತಾನೇ ಈ ಮನೆಯ ಸರ್ವಾಧಿ ಕಾರಿಣಿಯೆಂದು ಶಾರದೆಯು ಅಂತರಂಗದಲ್ಲಿ ತಿಳಿದಿದ್ದರೂ, ಬಹಿರಂಗದಲ್ಲಿ ಅದನ್ನು ಸ್ವಲ್ಪವೂ ತೋರಗೊಡಸೆ, ತಾನು ಈ ಮನೆಗೆ ಯಾರೂ ಅಲ್ಲವೆಂದೂ, ಶಶಿಮುಖಿಯೇ ಇಲ್ಲಿಯ ಸರ್ವಾಧಿಕಾರಿಣಿಯೆಂದೂ ತೋರಿಸುತ್ತಿದ್ದಳು. ಇದರಿಂದಲೇ ಶಶಿಮುಖಿಯು ಶಾರದೆಯ ವಿಷಯದ ತನ್ನ ಆಂತರಂಗಿಕ ಅಸೂಯೆಯನ್ನು ಬದಿಗಿಟ್ಟು, ತಾನೇ ಆ ಮನೆಯ ಸ್ವಾಮಿನಿಯೆಂದು ಒಳ್ಳೇ ಈರ್ಷೆಯಿಂದ ವ್ಯವಹರಿಸುತ್ತಿದ್ದಳು. ಶಾರದೆಯು ಆ ಮನೆಯಲ್ಲಿ ತನ್ನ ದೆಂದು ಒಂದೇ ಒಂದು ಸ್ಥಾನವನ್ನು ಕಾದಿಟ್ಟುಕೊಂಡಿದ್ದಳು. ಅಲ್ಲಿ ಮಾತ್ರ ಶಶಿಮುಖಿಯ ಪ್ರವೇಶವು ಯಾವ ಬಗೆಯಿಂದಲೂ ಆಗುವಂತಿರಲಿಲ್ಲ. ಶಾರ ದೆಯು ಚಂದ್ರಕಾಂತನ ಸುತ್ತು ಮುತ್ತು ಹಗಲಿರುಳುಗಳೆನ್ನದೆ ತನ್ನ ದೃಷ್ಟಿಯ ಪಹರೆಯನ್ನು ಇಟ್ಟದ್ದರಿಂದ, ಶಾರದೆಯ ಕಣ್ಣು ತಪ್ಪಿಸಿ ಆತ ನೊಡನೆ ಯಾರೂ ಯಾವ ಬಗೆಯ ವ್ಯವಹಾರವನ್ನೂ ಮಾಡುವಂತಿರಲಿಲ್ಲ. ಶಶಿಮುಖಿಯು ಆ ಮನೆಯಲ್ಲಿ ಬೇಕಾದಷ್ಟು ಬಗೆಯಿಂದ ತನ್ನ ಸ್ವಾಮಿತ್ವ ವನ್ನು ಪ್ರಸ್ಥಾಪಿಸಿಕೊಂಡು ನಡೆದರೂ, ಆಕೆಗೆ ಚಂದ್ರಕಾಂತನಾಗಲಿ ಶಾರದೆ ಯಾಗಲಿ ಯಾವ ಬಗೆಯ ಆತಂಕವನ್ನೂ ಪಡಿಸಲೆತ್ನಿಸುತ್ತಿರಲಿಲ್ಲ. ಆಕೆಯ ಪ್ರವೇಶವು ತಮ್ಮಿಬ್ಬರ ಅಂತರಂಗದಲ್ಲಿ ಆಗದಂತೆ ಶಾರದೆಯು ಬಹು ಎಚ್ಚರ ದಿಂದ ನೋಡಿಕೊಳ್ಳುತ್ತಿದ್ದಳು. ಬುದ್ಧಿವಂತೆಯಾದ ಈ ಹುಡಿಗೆಯು ಯಾವ ಮಾಯೆ-ಮಾಟಗಳಿಂದಲೋ ತನ್ನ ಜಗಳಗಂಟತನಕ್ಕೆ ತಡೆ ಹಾಕಿರುವ ಳೆಂದು ಶಶಿಮುಖಿಯು ಮೇಲಿಂದ ಮೇಲೆ ಅಂದುಕೊಳ್ಳುತ್ತಿದ್ದಳು. ಈ ಬಗೆಯ ಸ್ಥಿತಿಯಲ್ಲಿ ೩-೪ ವರ್ಷಗಳು ಕಳೆದುಹೋದವು. ಈಗ ಶಾರದೆಗೆ ೧೭ ತುಂಬಿ ೧೮ರಲ್ಲಿ ಬಿದ್ದಿತ್ತು.

ವಯಸ್ಸು ಹೆಚ್ಚಾದಂತೆ ಸರ್ವಸಾಮಾನ್ಯವಾಗಿ ಎಲ್ಲ ಗಂಡಸರಲ್ಲಿಯೂ ಒಂದು ಪ್ರಕಾರದ ವ್ಯವಹಾರ ಜ್ಞಾನವು ಹೇಗೆ ತನ್ನಷ್ಟಕ್ಕೆ ತಾನೇ ಹೆಚ್ಚು ವದೋ, ಹಾಗೆ ಸ್ತ್ರೀಯರಲ್ಲಿ ಮಾತ್ರ ಕಂಡು ಬರುವದು ವಿರಲ. ವ್ಯವಹಾರ ಜ್ಞಾನವು ಗಂಡಸರಲ್ಲಿಯು ವಯಸ್ಸಿನ ಮಾನದಿಂದ ೧೦, ೨೦, ೨೫, ೩೦, ೪೦, ೫೦, ೬೦ ವರ್ಷಗಳಲ್ಲಿ ಭಿನ್ನ ಭಿನ್ನವಾಗಿರುತ್ತದೆ. ಮೂವತ್ತು ವರ್ಷ

ವಯಸ್ಸಿನ ಯಾವನೊಬ್ಬ ಗಂಡಸು ೨೦ ವರ್ಷದ ಯುವಕನಿಗಿಂತ ಬುದ್ಧಿವಂತನೂ, ಧೋರಣೆಯೂ, ಸುತ್ಸದ್ಬುದ್ಧಿಯೂ ಆಗಿ ತೋರುತ್ತಿರುತ್ತಾನೆ; ಆದರೆ ಅವೇ ವಯಸ್ಸಿನ ಇಬ್ಬರು ಹೆಂಗಸರಲ್ಲಿ ಅಷ್ಟು ವಿಷಮತೆಯು ಕಂಡು ಬರುವದಿಲ್ಲ. ಲಗ್ನವಾದ ಮೇಲೆ ಅವರು ಸಫೆಣ್ಣೆ, ನಾದಿನಿ, ಅಜ್ಜಿ ಈ ಸ್ಥಾನಗಳಿಗೆ ಮುಟ್ಟಿ, ಬಹಳವಾದರೆ ಮುತ್ತಜ್ಜಿಯ ಸ್ಥಳದಲ್ಲಿ ಸಹ ಅಲ್ಪ-ಸ್ವಲ್ಪ ಕಾಲ ಉಸ್ತುವಾರಿ ಮಾಡುವದನ್ನು ಕಾಣಬಹುದು. ಅದಕ್ಕಿಂತಲೂ ಹೆಚ್ಚಾದ ವಯಸ್ಸಿನ ಹೆಂಗಸರೂ ಲಗ್ನವಾಗದ ಕುಮಾರಿಯರೂ ಒಂದೇ ತರಗತಿಯಲ್ಲಿ ಎಣಿಸತಕ್ಕವರು. ಹದಿನಾರರಿಂದ ಐವತ್ತಾರು ವರ್ಷ ವಯಸ್ಸಿನ ವರೆಗಿನ ಎಲ್ಲ ಹೆಂಗಸರಲ್ಲಿ ಬುದ್ಧಿವಂತಿಕೆಯ ಇಲ್ಲವೆ ವ್ಯವಹಾರಕುಶಲತೆಯ ದೃಷ್ಟಿಯಿಂದ ವಿಶೇಷವಾದ ಹೆಚ್ಚು ಕಡಿಮೆಗಳು ಕಂಡು ಬರುವದಿಲ್ಲ. ಇನ್ನು ಇದೇ ಸಿದ್ಧಾಂತದ ಮಾತೆಂದು ಮಾತ್ರ ಯಾರೂ ತಿಳಿಯಬಾರದು. ಸ್ಥಾನ ಭೇದದಿಂದ ಇದರಲ್ಲಿ ತುಸ ವ್ಯತ್ಯಸವುಂಟಾಗಬಹುದಾದರೂ, ಮೇಲೆ ವಿವರಿಸಿದ ಸಂಗತಿಯೇ ಬಹುಶಃ ಎಲ್ಲ ಹೆಂಗಸರಲ್ಲಿಯೂ ಕಂಡು ಬರುತ್ತಿರುತ್ತದೆ.

ಒಂದು ದಿನ ಅಪರಾಹ್ಣ ಕಾಲದಲ್ಲಿ ಚಂದ್ರಕಾಂತನ ನೆರೆಮನೆಯ ಒಬ್ಬ ವೃದ್ಧಳು ಶಶಿಮುಖಿಯ ಭೆಟ್ಟಿಗೆಂದು ಚಂದ್ರಕಾಂತನ ಮನೆಗೆ ಬಂದಿದ್ದಳು. ಅವಳು ಬಂದ ಕಾಲಕ್ಕೆ ಶಾರದೆಯು ತನ್ನ ಕೋಣೆಯ ಪಶ್ಚಿಮ ದಿಕ್ಕಿನ ಕಿಟಕಿಯನ್ನು ತೆರೆದು, ನಿರಭ್ರವಾದ ಆಕಾಶದ ಕಡೆಗೆ ಟಕಮಕ ಎಂದು ನೋಡುತ್ತ ನಿಂತುಕೊಂಡಿದ್ದಳು. ಆ ಮುದುಕೆಯು ಒಂದಿಷ್ಟು ಮಿಠಾಯಿಯನ್ನೂ ಒಂದು ಮಲ್ಲಿಗೆಯ ಹೂವಿನ ಮಾಲೆಯನ್ನೂ ತಕ್ಕೊಂಡು ಬಂದು, ಶಾರದೆಗೆ ಮಾಲೆ ಮುಡಿಸಿ, ಮಿಠಾಯಿಯನ್ನು ಆಕೆಯ ಮುಂದಿಟ್ಟು:-ತಂಗೀ, ಇಂದಿನಿಂದ ನೀನು ನನ್ನ ಜೀವದ ಗೆಳತಿಯಾದೆ. ಹೌದಲ್ಲೇ ಗೆಳತೀ! ಎಂದು ಆಲಂಗಿಸಲು, ಶಾರದೆಯು ಮೊದಲು ಬಲು ಸಂಕೋಚಗೊಂಡಳು. ಆದರೂ ಮಂದಹಾಸದಿಂದ ತಲೆ ಬೊಗ್ಗಿಸಿ ಸಮ್ಮತಿ ಸೂಚಿಸಿದಳು.

ಅಂದಿನಿಂದ ಶಾರದೆಯು ತಿಳಿದೇ ಆಗಲಿ, ತಿಳಿಯದೇ ಆಗಲಿ ಆ ನೆರೆಮನೆಯ ವೃದ್ಧಳನ್ನು ಗೆಳತಿಯಂತೆ ಪ್ರೀತಿಸಹತ್ತಿದಳು, ದಿನದಿನಕ್ಕೆ ಅವರಿಬ್ಬರಲ್ಲಿಯೂ ಸ್ನೇಹ ಭಾವವು ವೃದ್ಧಿಂಗತವಾಗತೊಡಗಿತು ಆದರೂ ಅವಳಂತಹ ದಿನ ಹೋದವಳೊಡನೆ ಜೀವದ ಗೆಳತಿಯಂತೆ ವ್ಯವಹರಿಸುವದು ಶಾರದೆಗೆ ಜೀವದ ಮೇತ್ತ ಬರುತ್ತಿತ್ತು; ಆದರೆ ಆ ಊರಲ್ಲಿ ಸಮವಯಸ್ಕರಾದ ಗೆಳತಿಯಾರಾರೂ ಇರದ್ದರಿಂದ ಅನಿವಾರ್ಯಹಕ್ಕಾಗಿ ಶಾರದೆಯು ಹಾಗೆ ನಡೆ

ಕೊಳ್ಳಲೇ ಬೇಕಾಗಿತ್ತು. ಶಾರದೆಯು ಒಂದು ವೇಳೆ ಹಾಗೆ ನಡೆಯಲಿಕ್ಕೆ ಅನುಮಾನಿಸಿದ್ದರೂ, ಆ ವೃದ್ಧಳು ಅವಳನ್ನು ಬಿಡುವವಳೇ?

ಆ ವೃದ್ಧಳು ಶಾರದೆಯ ಕಡೆಗೆ ದಿನಾಲು ಬರಹತ್ತಿದಳು. ಅವರಲ್ಲಿ ಹೆಚ್ಚು ಸಂಘರ್ಷಣವಾಗಲು, ಒಂದು ದಿನ ಆ ವೃದ್ಧಳು:—ಗೆಳತೀ, ಶಾರದೇ, ನೀನು ದೊಡ್ಡವರ ಮನೆಯವಳೆಂದಾಗಲಿ, ನಿಮ್ಮ ಅತ್ತೆ ಶಶಿಮುಖಿಯ ಮೋರೆ ನೋಡಿಯಾಗಲಿ, ನಾನು ನಿಮ್ಮ ಮನೆಗೆ ಬರುತ್ತಿರುವದಿಲ್ಲ ನಿನಗೆ ಈ ಊರಲ್ಲಿ ಅನ್ಯ ಯಾವ ಹೆಣ್ಣುಮಗಳ ಸ್ನೇಹವೂ ಇರುವದಿಲ್ಲ. ನಿನ್ನಂಥ ನವ ತರುಣಿಗೆ ಸ್ನೇಹಾಭಾವದಿಂದ ಬಲು ಜಡವೆನಿಸುವದೆಂಬದನ್ನು ಅನುಭವ ದಿಂದ ತಿಳಿದ ನಾನು, ನಿನ್ನೊಡನೆ ಬೇಕಂತ ಸ್ನೇಹ ಬಳಿಸಿ ನಡೆಯುತ್ತಿ ರುತ್ತೇನೆ.

ಶಾರದೆಯು ಎಷ್ಟು ಜಾಣೆಯಾದರೂ ಧೋರಣಿಯಾದರೂ ಆಕೆಗೆ ಆ ವೃದ್ಧಳ ಅಷ್ಟೊಂದು ಸ್ನೇಹದ-ಗೆಳೆತನದ-ಇಂಗಿತವು ತಿಳಿಯಲಿಲ್ಲ. ಜಗ ದೊಡೆಯನಾದ ಮಹೇಶನಿಗೇ ತಿಳಿಯದ ಮೂರು ಗುಂಭ ವಿಷಯಗಳಲ್ಲಿಯ "ನಾರಿಯರ ಮನದ ಡೊಂಕಂ" ಇದೊಂದಾದರೂ ಆ ಅನಭಿಜ್ಞಳಿಗೆ ತಿಳಿ ಯುವದೆಂತು? ಚಂದ್ರಕಾಂತನಿಗೆ ಶಾರದೆಯ ಮುಖಾಂತರ ಆ ವೃದ್ಧಳ ಆಗಮನವು ಆಗಾಗ್ಗೆ ತಿಳಿಯಹತ್ತಿತು. ಅವನು ಅದೇ ಊರವನಾದ್ದರಿಂದ. ಆ ವೃದ್ಧಳ ಪೂರ್ವಚರಿತ್ರವು ಆತನ ಕಿವಿಗೆ ಅಲ್ಪ-ಸ್ವಲ್ಪಾಗಿ ಬಿದ್ದಿತ್ತು ಅದರಿಂದ ಅವನಿಗೆ ಆ ವೃದ್ಧಳ ಇಂಗಿತವು ತಿಳಿಯಿತು. ಅವಳೊಡನೆ ಸ್ನೇಹ ಬಳಿಸಬೇಡೆಂದು ಚಂದ್ರಕಾಂತನು ತನ್ನ ಹೆಂಡತಿಗೆ ಹೇಳಬೇಕೆಂದು ತನ್ನ ಮನದಲ್ಲಿ ಹಲವು ಸಾರೆ ಆಲೋಚಿಸುತ್ತಿದ್ದನು. ಒಂವೆರಡು ಸಾರೆಯಂತೂ ಆ ನುಡಿಗಳು ಆತನ ತುಟಿಗಳ ಮೇಲೆ ಸಹ ಬಂದಿದ್ದವು; ಆದರೆ ಅವನು ಅವುಗಳನ್ನು ಹೊರಗೆಡವದೆ, ಹತ್ತೊತ್ತಿಕ್ಕಿ ಸುಮ್ಮನಾದನು. ಆ ವೃದ್ಧಳು ಹೇಗೆಯೋ ಇರಲೊಲ್ಲಳೇಕೆ, ತನ್ನ ಹೆಂಡತಿಯು ಅವಳ ಬಲಗೆ ಬೀಳತಕ್ಕವ ಳಲ್ಲೆಂಬ ಭರವಸೆಯು ಅವನಿಗೆ ಸಂಪೂರ್ಣವಾಗಿ ಇದ್ದುದರಿಂದ, ಆ ವೃದ್ಧಳ ವಿಷಯದ ಅನಿಷ್ಟ ಸಂಗತಿಯನ್ನು ಶಾರದೆಗೆ ತಿಳಿಸಿ, ಅವಳ ಅಂತರಂಗಕ್ಕೆ ವ್ಯಥೆಯನ್ನುಂಟುಮಾಡಬಾರದೆಂದು ಚಂದ್ರಕಾಂತನು ಆಗ ಸುಮ್ಮನಿದ್ದನು.

ಹೀಗಿರಲು, ಒಂದು ದಿನ ಶಾರದೆಯು ಆ ವೃದ್ಧಳ ದಾರಿ ಕಾಯುತ್ತ ಎಷ್ಟೋ ಹೊತ್ತಿನ ವರೆಗೆ ತನ್ನ ಕೋಣೆಯೊಳಗೆ ಕುಳಿತಳು. ಅಂದು ಆಕಾ ಶವು ಮೇಘಗಳಿಂದ ಆವೃತ್ತವಾಗಿ ಝಿಪ್-ಝಿಪ್ ಎಂದು ಮಳೆ ಬೀಳು ತ್ತಿತ್ತು. ಹೊರಗೆ ಮಳೆ ಸುರಿಯುತ್ತಿರುವದರಿಂದಲೇ ಇಂದು ತನ್ನ ಗೆಳ

ತಿಯು ಬಂದಿರಲಿಕ್ಕಿಲ್ಲೆಂದು ಶಾರದೆಯು ತಿಳಿದಳು. ದಿನಾಲು ತಪ್ಪದೆ ಬರುತ್ತಿದ್ದ ಆ ಮುದುಕಿಯು ಸಂಜೆಯಾದರೂ ಶಾರದೆಯಲ್ಲಿಗೆ ಬರಲಿಲ್ಲ. ಅಂದು ಶಶಿಮುಖಿಯಾದರೂ ಮಧ್ಯಾಹ್ನದಿಂದ ಮನೆಯಲ್ಲಿರಲಿಲ್ಲ. ಅದನ್ನೆಲ್ಲ ತಿಳಿದ ಶಾರದೆಯು ಅಂಜುತ್ತಂಜುತ್ತ ತನ್ನ ಗಂಡನ ಬೈಠಕಖಾನೆಯ ಕೋಣೆಗೆ ಹೋದಳು. ಮಹತ್ವದ ಕೆಲಸದ ಹೊರತು ಅಲ್ಲಿಗೆ ಅನ್ಯರಾರೂ ಹೋಗುತ್ತಿರಲಿಲ್ಲ. ಶಾರದೆಯೂ ಸಹ ಕ್ವಚಿತ್ತಾಗಿಯೇ ಅತ್ತ ಹೋಗುತ್ತಿದ್ದಳು. ಆದ್ದರಿಂದ ಅಂದು ಆಕಸ್ಮಿಕವಾಗಿ ಅಲ್ಲಿಗೆ ಬಂದಿದ್ದ ಶಾರದೆಯನ್ನು ಕಂಡು ಚಂದ್ರಕಾಂತನು ವಿನೋದದಿಂದ:—ಶಾರದೇ, ಇಂದು ನಿನ್ನ ಗೆಳತಿಯು ನಿನ್ನಲ್ಲಿಗೆ ಬರಲಿಲ್ಲವೇ? ಎಂದು ಅಂದನು.

"ಇಲ್ಲ"

"ಅಂತೆಯೇ ಇಂದು ನಿನಗೆ ನನ್ನ ನೆನಪಾಯಿತಷ್ಟೇ?"

ಚಂದ್ರಕಾಂತನ ಆ ನುಡಿಯನ್ನು ಕೇಳಿ ಶಾರದೆಯು ನಕ್ಕಳು. "ಇಲ್ಲಿಗೆ ಬಂದು ತಮ್ಮ ಬಳಿಯಲ್ಲಿ ಕೂಡ್ರಬೇಕೆಂದು ನನಗೆ ಹಗಲೆಲ್ಲ ಅನಿಸುತ್ತದೆ; ಆದರೆ ಬರುವ ಸಾಹಸ ಮಾತ್ರ ನನ್ನಿಂದಾಗುವದಿಲ್ಲ" ಎಂದು ಅವಳು ಮನದಲ್ಲೇ ಅಂದುಕೊಂಡು, ಪ್ರಕಾಶವಾಗಿ:—"ಹೊರಗೆ ಮಳೆ ಬೀಳುತ್ತಿರುವದರಿಂದ ಅವಳು ಬಂದಿರಲಿಕ್ಕಿಲ್ಲೆಂದು ಅನಿಸುತ್ತದೆ."

"ಇಷ್ಟೇ ಕಾರಣವೆಂದು ನನಗನಿಸುವದಿಲ್ಲ. ನಮ್ಮ ಚಿಕ್ಕಪ್ಪನ ಚಿಕ್ಕ ಮಗಳಾದ ನಿರ್ಮಲೆಗೆ ಆಶೀರ್ವಾದ ಮಾಡಲಿಕ್ಕೆಂದು ಅವಳು ಅವರಲ್ಲಿಗೆ ಹೋಗಿರಬಹುದಾಗಿದೆ. ಆಕೆಯ ಲಗ್ನವು ಬೇಗನೆ ಆಗತಕ್ಕದ್ದಿದೆ. ಅದಕ್ಕೋಸ್ಕರವಾಗಿಯೇ ನಿನ್ನ ವೃದ್ಧ ಗೆಳತಿಯು ಇಂದು ಅತ್ತ ಮೋರೆ ತಿರುವಿದಂತೆ ತೋರುತ್ತದೆ."

"ಹಾಗೂ ಆಗಿರಬಹುದು"

ಬಳಿಕ ಚಂದ್ರಕಾಂತನು ಎಷ್ಟೋ ಹೊತ್ತಿನ ವರೆಗೆ ಚಿಂತಾಕ್ರಾಂತನಾಗಿ ಕುಳಿತು, ನಂತರ "ತಿಳಿಸಲಿಕ್ಕೆ ದುಃಖವಾಗುವದೇನಂದರೆ, ಮಧ್ಯಾಹ್ನದಿಂದ ನಮ್ಮ ಅತ್ತೆಯೂ ಮನೆಯಲ್ಲಿ ಕಾಣುವದಿಲ್ಲವಲ್ಲ!!"

"ಅವರೂ ಅತ್ತ ಕಡೆಗೇ ಹೋಗಿರಬಹುದಲ್ಲವೇ?"

ಚಂದ್ರಕಾಂತನು ಏಕಾಗ್ರಚಿತ್ತದಿಂದ ಮತ್ತೆ ಏನೇನೋ ಯೋಚಿಸತೊಡಗಿದನು.

ಅದುವರೆಗೆ ದೂರದಲ್ಲಿದ್ದ ಶಾರದೆಯು ಆತನ ಸಮೀಪಕ್ಕೆ ಬಂದು ಕುಳಿತು, ಅವನನ್ನು ಕುರಿತು:—ಇಷ್ಟು ಏಕಾಗ್ರತೆಯಿಂದ ಯೋಚಿಸುವದೇನು? ಅದು ನನಗೆ ತಿಳಿಯಬಾರದೇ?

ಚಂದ್ರಕಾಂತನು ಮುಗುಳುನಗೆಯಿಂದ ಅವಳ ಎರಡೂ ಕೈಗಳನ್ನು ಹಿಡಿದು ಜಗ್ಗಿಕೊಂಡು ಮೆಲ್ಲ ಮೆಲ್ಲನೆ ಹೇಳುತ್ತಾನೆ:—ಶಾರದೇ; ವಿಶೇಷ ವೇನೂ ಇಲ್ಲ. ನನ್ನ ನಿರ್ಮಲೆಯ ಲಗ್ನ! ಆ ಬಗ್ಗೆ ಕಕ್ಕನು ನನಗೆ ಒಂದಿಷ್ಟೂ ವರ್ತಮಾನ ಕೊಡದೆ, ನಮ್ಮ ಅತ್ತೆ-ಮಾವಂದಿರನ್ನು ಕೂಡ ಕರೆಸಿಕೊಂಡಿರುತ್ತಾನೆ!! ನಾವಿಬ್ಬರೇ ಅವರಿಗೆ ಪರಕೀಯರಾದೆವಲ್ಲವೇ!!!

ಹೀಗೆ ಹೇಳುವಾಗ ಚಂದ್ರಕಾಂತನ ದನಿಯಲ್ಲಿ ಒಂದು ತರದ ನಡುಗು ಹುಟ್ಟಿತು. ಶಾರದೆಯು ಆತನನ್ನು ಕುರಿತು:—ನೀವು ಈ ಬಡ ದಾಸಿಗೆ ಆಶ್ರಯ ಕೊಟ್ಟಾಗಿನಿಂದಂತೂ ಅವರಿಗೆ ಬಹಳೇ ಪರಕೀಯರಾದಿರಲ್ಲವೆ? ನೀವು ನನ್ನನ್ನು ವರಿಸದಿದ್ದರೆ, ಈ ಒಳಗಾಗಿಯೇ ನಿಮ್ಮ-ಅವರಲ್ಲಿಯ ಜಗಳವು ತೀರಿ, ಎಲ್ಲರೂ ಏಕತ್ರರಾಗಿರುತ್ತಿದ್ದಿರಿ, ಎಂದಂದಳು.

ಚಂದ್ರಕಾಂತನು ಮುಗುಳು ನಗೆಯಿಂದಲೇ:—ಕೂಡಿರುವ ಅವಶ್ಯ ಕತೆಯಿಲ್ಲ. ನೀನಿಲ್ಲದಿದ್ದರೆ ಕಕ್ಕನ ಕೂಡ ಕೂಡಿ ನಡೆದು, ನಾನು ಹೆಚ್ಚಿನ ಸೌಖ್ಯ ಹೊಂದುತ್ತಿದ್ದೆನೆಂತಲ್ಲ. ಈಗಿನ ನನ್ನ ಸ್ಥಿತಿಯೇ ಒಳಿತಾಗಿರುತ್ತದೆ. ನನ್ನ ಕಕ್ಕನ ಅನುಮತಿಯಂತೆ ನಾನು ಲಗ್ನವಾಗಿದ್ದರೆ, ನನಗೆ ನಿನ್ನ ಲಾಭ ವಾಗುತ್ತಲೇ ಇರಲಿಲ್ಲ. ನಿನ್ನ ಕುಲಗೋತ್ರಗಳು ಯೋಗ್ಯವಿಲ್ಲೆಂದು ನಿರ್ಣ ಯಿಸಿ, ಅವನು ನನ್ನ-ನಿನ್ನ ಲಗ್ನವನ್ನೇ ಆಗಗೊಡುತ್ತಿರಲಿಲ್ಲ.

ಆ ನುಡಿಗಳನ್ನು ಕೇಳಿ ಕೇಳದ ಹಾಗೆ ಶಾರದೆಯ ಅಂತರಂಗವು ನಡುಗ ಹತ್ತಿತು. ಆಗ ಸಂಧ್ಯಾಕಾಲವಾದ್ದರಿಂದ ಮನೆಯೊಳಗೆಲ್ಲ ಕತ್ತಲೆಯು ಮುಸುಕಲಾರಂಭಿಸಿತ್ತು. ಅದರಿಂದ ಅವಳ ಮೋರೆಯ ಮೇಲಿನ ಮ್ಲಾನ ತೆಯು ಚಂದ್ರಕಾಂತನಿಗೆ ಕಾಣಿಸಲಿಲ್ಲ; ಆದರೆ ಚಂದ್ರಕಾಂತನ ಕೈಯೊಳ ಗಿದ್ದ ಅವಳ ಕೈಗಳು ಮಾತ್ರ ಥರಥರನೆ ನಡುಗುತ್ತಿದ್ದವು. ಅದರಿಂದ ಶಾರದೆಯ ಮನಃಸ್ಥಿತಿಯೆಲ್ಲವೂ ಚಂದ್ರಕಾಂತನಿಗೆ ಗೋಚರವಾಯಿತು ಆದರೂ ಅವನು ಮುಗುಳು ನಗೆಯಿಂದಲೇ:—ಈ ಬಗ್ಗೆ ನಾನು ಅವನ ಅಭಿಪ್ರಾಯ ತಕ್ಕೊಂಡಿದ್ದರೆ ಏನಾಗುತ್ತಿತ್ತೋ ಅದಾರು ಬಲ್ಲರು?

ಶಾರದೆಯು ತುಸ ಹೊತ್ತು ಸುಮ್ಮನಿದ್ದು, ಬಳಿಕ:—ಅದಾರಿಗೆ ಗೊತ್ತು? ಆದರೆ ನನ್ನಂತಹ ಸಾವಿರಾರು ಜನ ದಾಸಿಯರು ನಾ ಮುಂದೆ ನಾ ಮುಂದೆ ಎಂದು ನಿಮ್ಮ ಮುಂದೆ ಬಂದೇ ಬರುತ್ತಿದ್ದರು.

ಚಂದ್ರಕಾಂತನು ಅವಳ ಕೈಗಳನ್ನು ಮತ್ತಿಷ್ಟು ಜಗ್ಗಿಕೊಂಡು:— ನನಗೆ ಆ ಸಾವಿರಾರು ಜನರ ಅವಶ್ಯಕತೆಯಿಲ್ಲ. ನನ್ನ ದಾಸಿಯು ಒಬ್ಬಳೇ ಆಗಿದ್ದು, ಇವಳು ಆ ಸಾವಿರಾರು ಜನರಿಗಿಂತ ಎಲ್ಲ ಬಗೆಯಿಂದಲೂ ಮಿಗಿ

ಲಾದವಳಾಗಿರುತ್ತಾಳೆಂದು ನಾನು ಭಾವಿಸಿರುತ್ತೇನೆ. ನೀನೂ ಹಾಗೆಂದು ದೃಢವಾಗಿ ತಿಳಿದುಕೋ.

ಮರುದಿನ ಯಥಾಕ್ರಮವಾಗಿ ನೆರೆಮನೆಯ ಆ ವೃದ್ಧಳು ಶಾರದೆಯ ಕಡೆಗೆ ಬಂದಳು; ಆದರೆ ಇಂದು ಆಕೆಯ ಮುಖಭಾವವೇ ಬೇರೆಯಾಗಿತ್ತು; ಅವಳು ಅಂದು ಬಂದವಳೇ ಮಲಿನ ಮುಖದಿಂದ ಸುಮ್ಮನೆ ಕುಳಿತುಬಿಟ್ಟಳು.

ಆಗ ಶಾರದೆಯು:—ನಿನ್ನಿನ ದಿನದಲ್ಲಿ ನನ್ನ ಗೆಳತಿಯ ದರ್ಶನವು ನನಗೇಕೋ ಆಗಲಿಲ್ಲವಲ್ಲ? ಎಂದು ಕೇಳಲು,

"ಹೌದು, ತಂಗೀ, ನಿನ್ನೆ ಬಹಳ ಕೆಲಸವಿತ್ತು. ಆ ಮನೆಯಲ್ಲಿ ನಿರ್ಮಲೆಯ ಲಗ್ನವಿದ್ದಿತು."

"ಅದು ತಿಳಿದಿದೆ. ಎಲ್ಲವೂ ಸರಿಯಾಗಿ ನಡೆಯಿತಷ್ಟೇ?"

ಆ ವೃದ್ಧಳು ಶಾರದೆಯ ಈ ಪ್ರಶ್ನೆಗೆ ಸರಿಯಾದ ಉತ್ತರ ಹೇಳಲಾರದೆ, ಶಾರದೆಯ ಕಡೆಗೆ ಟಕಮಕವೆಂದು ನೋಡುತ್ತ;—ಗೆಳತೀ, ನಿನಗೊಂದು ಮಾತು ಕೇಳುವೆನು. ದಿಟವಾದ ಉತ್ತರವನ್ನೀಯುವೆಯಾ?

"ಯಾವ ಮಾತದು?"

"ನೀನು ಸತ್ಯವಾಗಿ ಉತ್ತರ ಕೊಡುವದಾದರೆ ಕೇಳುತ್ತೇನೆ; ಇಲ್ಲದಿದ್ದರೆ ಆ ಮಾತಿನ ಪ್ರಯೋಜನವೇನು?"

ಶಾರದೆಯು ಯೋಚನೆಗೊಳಗಾದಳು. ಬಳಿಕ ಅವಳು:—"ಸುಳ್ಳೇಕೆ ಹೇಳುವೆನು?"

"ತಂಗೀ, ನೀನು ನನ್ನನ್ನು ನಂಬುವಿಯಷ್ಟೇ?"

"ನಂಬದೇನು?"

"ಹಾಗಾದರೆ ಹೇಳು ನೋಡೋಣ, ಚಂದ್ರಕಾಂತನು ನಿನ್ನಲ್ಲಿ ಎಷ್ಟರ ಮಟ್ಟಿಗೆ ಪ್ರೇಮವಿಟ್ಟಿರುವನೆಂಬದನ್ನು?"

ಆ ನುಡಿಯನ್ನು ಕೇಳಿ ಶಾರದೆಯು ನಾಚಿಕೊಂಡು:—ಅವರು ನನ್ನನ್ನು ಬಹಳವಾಗಿ ಪ್ರೀತಿಸುತ್ತಾರೆ.

"ಬಹಳ ಪ್ರೀತಿಸುತ್ತಾರೆಂದರೇನು? ಹೆಚ್ಚು ಪ್ರೀತಿಸುವನೋ-ಕಡಿಮೆ ಪ್ರೀತಿಸುವನೋ, ನಿನಗದು ಹೇಗೆ ತಿಳಿಯಿತು?"

ಶಾರದೆಗಾದರೂ ಅದು ಗೊತ್ತಾಗುವ ಬಗೆ ಹೇಗೆ? ಆದರಿಂದ ಅವಳಲ್ಲಿ ಒಂದು ಬಗೆಯ ಇತಿಮಿತಿ ಜ್ಞಾನವು ತಲೆದೋರಿತು. ಈ ಸುಸಂಧಿಯನ್ನು ಸಾಧಿಸಿ, ಆ ವೃದ್ಧಳು ಅನ್ನುತ್ತಾಳೆ:—"ತಂಗೀ, ಯಾವ ಸ್ತ್ರೀಗೆ ತನ್ನ ಗಂಡನ ಪ್ರೇಮದ ಮಟ್ಟು ತಿಳಿಯುವದಿಲ್ಲವೋ, ಅವಳು ಬಹು ವಿಪತ್ತಿಗೀಡಾಗುವದು ಖಂಡಿತವು!"

ಆ ವೃದ್ಧಳ ಆ ಅನುಭವಜನ್ಯ ನುಡಿಗಳನ್ನು ಕೇಳಿ, ಶಾರದೆಯ ಅಂತಃಕರಣಕ್ಕೆ ಒಂದು ತರಹದ ವೇದನೆಯುಂಟಾಯಿತು. ಆದರೂ ಅವಳು ಅದನ್ನು ಹತ್ತೊತ್ತಿಕ್ಕಿಕೊಂಡು :—“ಗೆಳತೀ, ಎಂಥ ವಿಪತ್ತದು ?”

“ಈಗಲೇ ನಾನವನ್ನು ನಿನಗೆ ತಿಳಿಸಲಾರೆನು; ಮುಂದೆ ಗೊತ್ತಾಗುವದು !” ಎಂದಂದು, ಆ ವೃದ್ಧಳು ಶಾರದೆಯ ಗಲ್ಲವನ್ನು ಹಿಡಿದು :— “ಇಂಥ ರೂಪವತಿ, ಗುಣವತಿ ಹಾಗು ಬುದ್ಧಿಮತಿಗೆ ಜನರು ಹೀಗೆನ್ನಬೇಕೇ ?” ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡಳು. ಶಾರದೆಗೆ ಆಕೆಯ ಆ ಮಾತಿನ ಅರ್ಥವಾಗದ್ದರಿಂದ, ಅವಳು ತನ್ನಷ್ಟಕ್ಕೆ ತಾನು ನಕ್ಕು ಸುಮ್ಮನಾದಳು.

---

## ೪ನೇ ತರಂಗ:—ಹರಭಟ್ಟನ ಸಂತಾಪ!

ನಿಜ ಸಂಗತಿಯು ಇನ್ನೂ ಹೊರಬಿದ್ದಿರಲಿಲ್ಲ. ಇತ್ತೀಚೆಗೆ ಹರಭಟ್ಟನಿಗೆ ಯಾವುದೋ ಒಂದು ಸಂಗತಿಯ ಬಗ್ಗೆ ಹೆಚ್ಚಾಗಿ ಸಂಶಯ ಬರತೊಡಗಿತ್ತು. ಉಡಿಗೆ-ತೊಡಿಗೆಗಳು ಸಾಮಾನ್ಯವಾಗಿದ್ದರೂ, ಮುಖ ಲಕ್ಷಣದಿಂದ ದೊಡ್ಡ ಮನುಷ್ಯರಂತೆ ತೋರುವವನಾವನೋ ಒಬ್ಬನು, ಎರಡು ಮೂರು ದಿನಗಳಿಂದ ಅವನ ಮನೆಯ ಅಡಿಗೆಯವಳಾದ ಸುಲೋಚನೆಯೆಡೆಗೆ ಬಂದು, ಗುಪ್ತರೀತಿಯಿಂದ ಮಾತಾಡಿಕೊಂಡು ಹೋಗುತ್ತಿದ್ದನು. ಸುಲೋಚನೆಯು ಹರಭಟ್ಟನಿಗೆ ಅದು ತಿಳಿಯದೆಂದೇ ಭಾವಿಸಿದ್ದಳು; ಆದರೆ ಹರಭಟ್ಟನು ಅದನ್ನು ಹೇಗೋ ಕಂಡುಕೊಂಡಿದ್ದನು.

ಇಂದು ಮಧ್ಯಾಹ್ನ ಹರಭಟ್ಟನೂ ಮಹಾಬಳಜ್ಜನೂ ಅಟ್ಟದ ಮೇಲಿನ ಚೌಕದಲ್ಲಿ ಚದುರಂಗದಾಟವನ್ನಾಡುತ್ತಿದ್ದರು. ಆಟವು ಒಳ್ಳೇ ಭರತಿಯಲ್ಲಿರಲು, ಕೆಳಗಿನ ಕೋಣೆಯಲ್ಲಿ ಒಂದು ಪ್ರಕಾರದ ಗೊಂದಲವೆದ್ದಿತು. ಯಾವಳೋ ಒಬ್ಬಳು ಕೇವಲ ಮೃದು ಮತ್ತು ನಡುಗುವ ದನಿಯಿಂದ ದಯಾ ಯಾಚನೆ ಮಾಡುತ್ತಿದ್ದಳು; ಮತ್ತೊಬ್ಬನು ಒಳ್ಳೇ ಕರ್ಕಶ ದನಿಯಿಂದ ಒದರುತ್ತ ಆಕೆಯನ್ನು ತಿರಸ್ಕರಿಸುತ್ತಿದ್ದನಲ್ಲ ಬೆದರಿಸುತ್ತಿದ್ದನು ಸಹ. ಆಗ ಹರಭಟ್ಟನು ಆಟವನ್ನು ಬಿಟ್ಟು:—ಅಜ್ಜಾ, ಕೆಳಗೆ ಯಾರೋ ವಾದಿಸುತ್ತಿರುವಂತೆ ಕೇಳುವದಿಲ್ಲವೆ? ಎಂದೆನ್ನಲು,

ಮಾಬಳಜ್ಜನು :—ಹರಭಟ್ಟಾ, ಏನಾದರೊಂದು ನೆವ ಮಾಡಿ, ಹಣ್ಣಿಗೆ ಬಂದಿರುವ ಆಟವನ್ನು ತಪ್ಪಿಸಬೇಕೆನ್ನುತ್ತೀಯೇನು ?

ಹರಭಟ್ಟನು ಅಜ್ಜನ ಮಾತಿಗೆ ಲಕ್ಷ್ಯಗೊಡದೆ, ಕೆಳಗಡೆಯ ದನಿಯನ್ನು ಆಲಿಸಿ ಕೇಳಹತ್ತಿದನು. ಕೆಲ ಕ್ಷಣಗಳ ವರೆಗೆ ಏನೂ ಕೇಳಿಸಲಿಲ್ಲ. ಕೇವಲ ನಿಶ್ಶಬ್ದವಾಗಿತ್ತು. ಬಳಿಕ ಆ ವಾದವಿಸ್ವಾಟವು ಮತ್ತೆ ಹೆಚ್ಚಿತು. ಅದರಿಂದ ಹರಭಟ್ಟನು ಕುಳಿತ ಸ್ಥಳದಿಂದ ಎದ್ದು ನಿಂತು:—ಅಜ್ಜಾ, ಸ್ವಲ್ಪ ತಡೆ; ನಾನು ಕೆಳಗೆ ಹೋಗಿ ಏನೆಂಬದನ್ನು ತಿಳಿದು ಬರುತ್ತೇನೆ.

ಹರಭಟ್ಟನು ಕೆಳಗಿಳಿದು ನೋಡುತ್ತಾನೆ; ತಮ್ಮ ಮನೆಯ ಅಡಿಗೆ ಯವಳಾದ ಸುಲೋಚನೆಯು ಆ ಮಲಿನ ವಸ್ತ್ರಧಾರಿಯಾದ ಆಗಂತುಕನ ಚರಣಗಳನ್ನು ಗಟ್ಟಿಯಾಗಿ ಹಿಡಿದು, ಹತ್ತೊತ್ತಿ ಬರುವ ದುಃಖವನ್ನು ನುಂಗಿಕೊಳ್ಳುತ್ತಿದ್ದಳು; ಆದರೆ ಆ ಆಗಂತುಕನಿಗೆ ಅದರಿಂದ ಕೊಂಚವೂ ದಯೆಯುತ್ಪನ್ನವಾಗಲಿಲ್ಲ. ಅವನು ಒಳ್ಳೇ ಆಕ್ರೋಶದಿಂದ:—"ನನ್ನ ಮಾತನ್ನು ನಡೆಸು; ಇಲ್ಲದಿದ್ದರೆ ನಾನು ನುಡಿದಂತೆ ನಡೆಯಲಿಕ್ಕೆ ತಪ್ಪುವ ದಿಲ್ಲ ನೋಡು!" ಎಂದು ನುಡಿಯುತ್ತ ಸುಲೋಚನೆಯನ್ನು ಅಂಜಿಸು ತ್ತಿದ್ದನು.

ಅದಕ್ಕೆ ಸುಲೋಚನೆಯು:—ನನ್ನನ್ನು ಕ್ಷಮಿಸು. ನೀನು ನನ್ನನ್ನು ಸರ್ವನಾಶಗೊಳಿಸಿರುತ್ತೀ. ಅದೊಂದೇ ಬಾಕಿ ಉಳಿದಿರುತ್ತದೆ; ಅದನ್ನು ಮಾತ್ರ ಮಾಡಬೇಡ.

"ನಿನ್ನ ಮಗಳು ದೊಡ್ಡವರ ಮನೆಯ ಒಡತಿಯಾಗಿರುತ್ತಾಳೆ. ನೀನು ಅವಳಿಂದ ಎರಡುಸಾವಿರ ರೂಪಾಯಿಗಳನ್ನು ಪಡೆಯಲಾರೆಯಾ? ಹಣ ಸಿಕ್ಕೊಡನೆ ನಾನು ಹೊರಟೇ ಹೋಗುತ್ತೇನೆ."

"ನೀನು ಸೆರೆಕುಡುಕನು! ಅಸಚ್ಚರಿತ್ರನು!! ೨ ಸಾವಿರ ರೂಪಾಯಿ ಗಳು ನಿನಗೆಷ್ಟು ದಿನ ಪೂರಸುವವು? ಅವು ತೀರುತ್ತಲೆ ನೀನು ಮತ್ತೆ ಬಂದು, ಮತ್ತೆ ಹಣ ಕೇಳುವೆ. ಆದುದರಿಂದ ನಾನು ನಿನಗೆ ಏನೂ ಕೊಡುವದಿಲ್ಲ."

"ಇನ್ನು ನಾನು ಕುಡಿಯುವದನ್ನು ಬಿಟ್ಟೇ ಬಿಡುತ್ತೇನೆ, ಯಾವು ದೊಂದು ವ್ಯವಸಾಯ ಮಾಡಿಕೊಂಡು ಉಪಜೀವಿಸಹತ್ತುತ್ತೇನೆ; ಮತ್ತು ಇನ್ನು ಮುಂದೆ ನಾನು ಎಂದೂ ನಿನ್ನ ಬಳಿಗೆ ಹಣ ಬೇಡಲಿಕ್ಕೆ ಬರುವದಿಲ್ಲ."

ಆ ನುಡಿಗಳನ್ನು ಕೇಳಿ ಸುಲೋಚನೆಯು ಸ್ವಲ್ಪ ಹೊತ್ತು ಉತ್ತರ ವನ್ನೇನೂ ಕೊಡಲಿಲ್ಲ. ತಲೆಯನ್ನು ಬೊಗ್ಗಿಸಿ, ಕೈಜೋಡಿಸಿ ನಿಂತು ಕೊಂಡಳು. ನಂತರ:—ಕ್ಷಮಿಸು, ದುಡ್ಡಿಗಾಗಿ ನಾನು ಶಾರದೆಯನ್ನು ಕೇಳ ಲಾರೆನು, ಎಂದಳು.

ಹರಭಟ್ಟನು ಬಂದು ಪಕ್ಕದಲ್ಲಿಯೇ ನಿಂತಿರುವನೆಂಬದನ್ನು ಇದು ವರೆಗೆ ಅವರಿಬ್ಬರೂ ತಿಳಿದಿರಲಿಲ್ಲ; ಅಂತೆಯೇ ಅವರಿಬ್ಬರಲ್ಲಿ ಆ ಪ್ರಕಾರ ಅಸಂಕೋಚದಿಂದ ಸಂಭಾಷಣ ನಡೆದಿತ್ತು. ಹರಭಟ್ಟನನ್ನು ನೋಡಿದ ಕೂಡಲೆ ಅವರೀರ್ವರ ತಲ್ಲಣವೂ ಹಾರಿದಂತಾಯಿತು! ಹರಭಟ್ಟನು ಮುಂದೆ ಬಂದವನೇ ಆ ಆಗಂತುಕನನ್ನುದ್ದೇಶಿಸಿ:—ಎಲೋ, ನೀನು ಯಾರ ಅಪ್ಪಣೆ ಯಿಂದ ಈ ಮನೆಯನ್ನು ಪ್ರವೇಶಿಸಿರುವೆ? ಎಂದು ಬೆದರಿಸಿ ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಆ ಆಗಂತುಕನು ಏನು ಉತ್ತರ ಕೊಡಬೇ ಕೆಂಬ ಬಗ್ಗೆ ಮುಂದುಗಾಣದಾದನು. ತಾನು ಇಲ್ಲಿಗೆ ಬಂದದ್ದು ಸರಿಯಾಗ ಲಿಲ್ಲೆಂದು ತಿಳಿದು ಅವನು ಅಲ್ಲಿಂದ ಹೊರಡಹತ್ತಿದನು. ಆಗ ಹರಭಟ್ಟನು ಆತನ ಮುಂಗೈಯನ್ನು ಗಟ್ಟಿಯಾಗಿ ಹಿಡಿದು:—ಯಾಕೋ, ಯಾರು ನೀನು? ಯಾರ ಅಪ್ಪಣೆಯಿಂದ ಇಲ್ಲಿಗೆ ಬಂದಿರುತ್ತೀ? ಎಂದು ಮತ್ತೆ ಒದರಿ ಕೇಳಿದನು.

ಓಡಿ ಹೋಗುವದು ಸಾಧ್ಯವಾಗದ್ದರಿಂದ ಆತನು ಗಟ್ಟಿ ಧೈರ್ಯ ಮಾಡಿ:—ಈ ಸುಲೋಚನೆಯ ಹತ್ತರ ತುಸ ಕೆಲಸವಿದ್ದುದರಿಂದ ಬಂದಿ ದ್ದೆನು, ಎಂದನು.

ಹೀಗೆಂದು ಮಾತಾಡುವಾಗ ಆ ಆಗಂತುಕನ ಬಾಯಿಂದ ಸೆರೆಯ ದುರ್ಗಂಧವು ಹೊರಬಿದ್ದಿತು. ಹರಭಟ್ಟನು ಹೇಸಿಕೊಂಡು, ಮೂಗು ಮುಚ್ಚಿ ಕೊಳ್ಳುತ್ತ, ಕರ್ಕಶ ಸ್ವರದಿಂದ ಮತ್ತೆ:—ಇರಬಹುದು; ಆದರೆ ಯಾರ ಅಪ್ಪಣೆಯಿಂದ ನೀನು ಇಲ್ಲಿಗೆ ಬಂದೆ?

"ಇದಕ್ಕೆ ಅಪ್ಪಣೆಯ ಕಾರಣವೇನು?" ಹೀಗೆಂದು ನುಡಿಯುವಾಗ ಆ ಆಗಂತುಕನ ಮುಖ ಲಕ್ಷಣವು ಬೇರೆಯಾಯಿತು. ಆಗಿನ ಆತನ ಮುಖ ಲಕ್ಷಣದಿಂದ, ತನಗೆ ಈ ಮನೆಯನ್ನು ಪ್ರವೇಶಿಸುವ ಹಕ್ಕು ಸ್ವಾಭಾವಿಕ ವಾಗಿಯೇ ಇದ್ದುದಲ್ಲದೆ, ತನ್ನನ್ನು ಹಾಗೆಂದು ಕೇಳುವವನಾರೆಂಬ ಭಾವವೂ ಆ ಮುಖದಲ್ಲಿ ಒಡೆದು ಕಾಣಿಸಿಕೊಂಡಿತು. ಆ ತರದ ನಿರ್ಭಿಡೆಯ ಉತ್ತರ ವನ್ನು ಕೇಳಿ ಹರಭಟ್ಟನು ಮತ್ತಿಷ್ಟು ರೇಗಿಗೆದ್ದನು. ಆಗ ಆತನು:—ಹುಚ್ಚ ಸೂಳೇ ಮಗನೇ, ನಿನ್ನನ್ನು ಈಗಿಂದೀಗಲೇ ತುರಂಗಿಗೆ ಕಳಿಸುತ್ತೇನೆ; ಅಂದರೆ ತಿಳಿದೀತು ನಿನಗೆ, ಅಪ್ಪಣೆಯ ಅವಶ್ಯಕತೆಯೇನೆಂಬುದು.

ಅದಕ್ಕೆ ಆ ಆಗಂತುಕನು ಅಣಕಿಸುವ ದನಿಯಿಂದ:—ನೋಡಿರು ವೆನು, ನಿನ್ನಂತಹ ಎಷ್ಟೋ ಜನ ಭಟ್ಟರನ್ನು!

ಅದನ್ನು ಕೇಳಿಯಂತೂ ಹರಭಟ್ಟನ ಸಿಟ್ಟು ಅನಿವಾರವಾಗಲು, ಅವನು ಆ ಆಗಂತುಕನನ್ನು ಎಳೆಯುತ್ತ :—ನಡೆ,....ಮಗನೇ, ನಿನ್ನನ್ನು ಈಗಿಂದೀಗಲೆ ಪೋಲೀಸರ ಸ್ವಾಧೀನ ಮಾಡುತ್ತೇನೆ.

ಆಗ ಆ ಆಗಂತುಕನು ಒಂದು ಪ್ರಕಾರದ ಕಿರುನಗೆಯನ್ನು ನಕ್ಕನು! ಆ ಪೋಲೀಸರು ತನ್ನ ಕೂದಲನ್ನು ಕೂಡ ಕೊಂಕಿಸಲಾರರೆಂಬ ಧ್ವನಿಯು ಆತನ ಆ ನಗೆಯಲ್ಲಿ ಅಡಗಿದಂತೆ ತೋರಿತು. ಬಳಿಕ ಅವನು:—ಈಗಲೇ ಸ್ವಾಧೀನ ಪಡಿಸುವಿರಾ ? ಎಂದು ಅಂದು ಖ್ಖೊ ಖ್ಖೊಕ್ಕೆಂದು ನಗಲು,

ಹರಭಟ್ಟನು ಕ್ರೋಧ ಸಂತಪ್ತನಾಗಿ:—ಸೂಳೇ ಮಗನೇ, ಈಗಲೇ ಒಯ್ಯುವೆನು; ಎಂದಂದು ಅವನ ಕುತ್ತಿಗೆಗೆ ಕೈ ಹಾಕಿ ದೂಡಹತ್ತಿದನು.

ಆಗಂತುಕನು ನಿಂತಲ್ಲಿಂದ ಸ್ವಲ್ಪವೂ ಚಲಿಸದೆ, ಗಂಭೀರಭಾವದಿಂದ:—ಹರಭಟ್ಟರೇ, ಇಷ್ಟೊಂದು ಸಾಹಸಕ್ಕೆ ಪ್ರವೃತ್ತರಾಗಬೇಡಿರಿ. ನನ್ನನ್ನು ಪೋಲೀಸರ ಸ್ವಾಧೀನ ಮಾಡುವಿರೋ ಇಲ್ಲವೆ ತುರಂಗಕ್ಕೆ ಕಳಿಸುವಿರೋ ಆ ಬಗ್ಗೆ ನೀವು ತುಸ ವಿಚಾರ ಮಾಡಿ ಮಾಡಿರಿ. ಭಟ್ಟಾ, ನಾನು ನಿನ್ನನ್ನು ಈ ಕಾಶೀ ಕ್ಷೇತ್ರದಿಂದಲೇ ಹೊರಹೊರಡಿಸಬಲ್ಲೆನೆಂಬದನ್ನು ಲಕ್ಷ್ಯದಲ್ಲಿಡು.

ಈತನು ತನ್ನಂತಹ ನೀಚರ ಗುಂಪಿನವರ ಅಂಜಿಕೆ ತೋರಿಸುತ್ತಿರುವನೆಂದು ಭಟ್ಟನು ತಿಳಿದನು. ಕಾಶಿಗೆ ಹೊಸದಾಗಿ ಹೋದ ಜನರು ಆತನ ಅಂಥ ಮಾತಿಗೆ ಹೆದರಬಹುದು; ಆದರೆ ಎಷ್ಟೋ ವರುಷಗಳಿಂದ ಆ ಕಾಶೀ ಕ್ಷೇತ್ರದಲ್ಲಿ ಮನೆ ಮಾರು ಮಾಡಿಕೊಂಡಿದ್ದ ಆ ಹರಭಟ್ಟನು ಆಗಂತುಕನ ಆ ತರದ ಬಾಯಿಬಢಾಯಿಗೆ ಅಂಜತಕ್ಕವನೇ ? ಅದರಿಂದ ಆತನು ಮತ್ತಿಷ್ಟು ಸಿಟ್ಟಿಗೆದ್ದು :—ಮೂರ್ಖಾ, ನಿನ್ನ ಬಾಯಿ ಬಢಾಯಿಯನ್ನು ಸಾಕು ಮಾಡು, ಎನ್ನಲು,

"ಬಾಯಿ ಬಢಾಯಿಯಲ್ಲ; ಭಟ್ಟಾ, ನಾನನ್ನುವ ಮಾತು ನಿಜವು, ಸುಳ್ಳಲ್ಲ. ನಡೆ, ಪೋಲೀಸರ ಬಳಿಗೆ. ಅಲ್ಲಿಯೇ ನಿನ್ನ ಎಲ್ಲ ನೀಚತನವನ್ನು ಬೈಲಿಗಿಡುತ್ತೇನೆ."

"ಅದೇನು, ನೀನು ಅಲ್ಲಿ ಹೇಳುವದು ?" ಎಂದು ಹರಭಟ್ಟನು ಒತ್ತಿ ಕೇಳಲು, "ನನಗೇನು ತಿಳಿದಿದೆಯೋ ಅದನ್ನೆಲ್ಲ ಅಲ್ಲಿ ಹೇಳುತ್ತೇನೆ. ಅದರಿಂದ ನೀನು ಈ ಕಾಶೀ ನಗರದಲ್ಲಿ ಒಂದು ಕ್ಷಣ ಸಹ ನಿಲ್ಲದೆ, ಎಲ್ಲಿಯೋ ಹೊಳೆ-ಬಾವಿಗಳ ಪಾಲಾಗಬೇಕಾದೀತು; ನನ್ನ ಆ ನುಡಿಯಿಂದ ನೀನು ಜಾತಿಹೀನನೂ, ಕುಲಗೇಡಿಯೂ, ಅಬ್ರಾಹ್ಮಣನೂ ಎಂಬದು ಘಂಟಾಘೋಷವಾಗುವದು."

"ನಾನು ಅಬ್ರಾಹ್ಮಣನೇ?"

"ಹರಭಟ್ಟಾ, ಸಿಟ್ಟಾಗಬೇಡ. ನೀನು ನಿಜವಾಗಿಯೂ ಕುಲಗೆಟ್ಟಿರುತ್ತೀ. ಇಷ್ಟೇ ಅಲ್ಲ, ಕಳೆದ ೩-೪ ವರ್ಷಗಳಿಂದ ನಿನ್ನ ಮನೆಗೆ ಬಂದಂಥ ಯಾತ್ರಿಕರನ್ನು ಅವರ ಹೆಂಡಿರು-ಮಕ್ಕಳು ಸಹಿತವಾಗಿ ಕುಲಗೆಡಿಸಿಬಿಟ್ಟಿರುತ್ತೀ. ಈ ಸಂಗತಿಯನ್ನು ನಾನು ದೇಶ ದೇಶಾಂತರಗಳಲ್ಲಿಯೂ ಪ್ರಕಟಿಸುತ್ತೇನೆ."

ಆಗಂತುಕನ ಆ ನುಡಿಗಳನ್ನು ಕೇಳಿ, ಹರಭಟ್ಟನ ಹೌಹಾರಿತು. ಕೂಡಲೆ ಆತನ ಇದುವರೆಗಿನ ಉಚ್ಚ ಸ್ವರವು ತನ್ನಷ್ಟಕ್ಕೆ ತಾನೇ ಕುಗ್ಗಿ ಮೆತ್ತಗಾಯಿತು. ಆದರಿಂದ ಆತನು ಕುಗ್ಗಿದ ದನಿಯಿಂದಲೇ:—ನಾನು ಯಾತ್ರಿಕರನ್ನು ಕುಲಗೆಡಿಸಿರುವೆನೇ?

"ಅಹುದು. ಅದನ್ನು ನಿಜವೆಂದು ತೋರಿಸಿಕೊಡಲಿಕ್ಕೆ ನಾನು ಸಿದ್ಧನಿದ್ದೇನೆ."

ಇದನ್ನು ಕೇಳಿಯೆಂತೂ ಹರಭಟ್ಟನು ತೀರ ಮೆತ್ತಗಾದನು. ಆಗ ಅವನು ಮೆಲ್ಲನೆ:—ಹಾಗೆಂದರೇನು, ಬಿಚ್ಚಿಯಾದರೂ ಹೇಳಬಾರದೇ?

ಆಗ ಆ ಆಗಂತುಕನಿಗೆ ಹಾಯ ಎನಿಸಿತು. ಅವನು ಮುಗುಳು ನಗೆಯಿಂದ:—ನೀನೊಬ್ಬನೇ ಅದನ್ನು ತಿಳಿಯಬೇಕೆಂದಿರುವೆಯಾ? ಬೇಡ, ನಿನಗೊಬ್ಬನಿಗೇ ತಿಳಿಸುವದಿಲ್ಲ. ಹತ್ತಿಪ್ಪತ್ತು ಜನರನ್ನು ನೆರೆಸಿ, ಅವರೆದುರಿಗೆ ಅದನ್ನು ಹೇಳುತ್ತೇನೆ. ಅಷ್ಟು ಜನರು ಒಮ್ಮೆಲೆ ಸಿಗದಿದ್ದರೆ, ನಾಲ್ಕಾರು ಜನರನ್ನಾದರೂ ಕರೆ. ಅವರೆದುರಿಗೆ ನಿನ್ನ ಎಲ್ಲ ಪಂಚಾಂಗವನ್ನೂ ಬಿಚ್ಚಿ ಹರಡುತ್ತೇನೆ!

ಆಗ ಹರಭಟ್ಟನು ಜೀವದ ಗೆಳೆಯನಂತೆ ಆತನ ಕೈ ಹಿಡಿದು:—ಗೃಹಸ್ಥಾ, ಸಿಟ್ಟಾಗಬೇಡ. ನನ್ನಿಂದ ಆಕಸ್ಮಿಕವಾಗಿ ಬಹು ದೊಡ್ಡ ಅಪರಾಧವಾದವಕ್ಕಾಗಿ ಹೀಗೆ ಸಿಟ್ಟಾಗಬೇಡ; ಬಾ, ಒಳಗೆ ಬಾ, ಎಂದಂದು ಮಧ್ಯಪಾಯಿಯಾದ ಆ ಆಗಂತುಕನನ್ನು ತನ್ನ ಮನೆಯೊಳಗೆ ಕರೆದೊಯ್ದು ಒಂದು ಕೋಣೆಯಲ್ಲಿ ಕುಳ್ಳಿರಿಸಿದನು; ಹಾಗು ತದನಂತರ ಅವನು ಆ ಆಗಂತುಕನನ್ನು ಕುರಿತು:-ನೀನು ಅನ್ನುವದಾದರೂ ಏನು? ಎಂದು ವಿಚಾರಿಸಿದನು.

ಭಟ್ಟರೇ, ನೀವು ಯಾವ ಸುಲೋಚನೆಯು ಮಾಡಿದ ಅನ್ನವನ್ನು ಪ್ರತಿನಿತ್ಯದಲ್ಲೂ ಉಣ್ಣುತ್ತಿರುವಿರೋ, ಈಕೆಯನ್ನು ನೀವು ದೊರಕಿಸಿದ್ದಾದರೂ ಎಲ್ಲಿ?"

"ಈ ಕ್ಷೇತ್ರದಲ್ಲಿಯೇ ದೊರೆತಳು. ದುಃಖಿ-ಕಷ್ಟಿಯಾದ ಈ ಅನಾಥಳಿಗೆ ನಾನು ಆಶ್ರಯವಿತ್ತೆನು."

"ಸನಾಥಳಿಗಾಗಲಿ-ಶ್ರೀಮಂತಳಿಗಾಗಲಿ ನೀವು ಆಶ್ರಯ ಕೊಟ್ಟಿರುತ್ತೀರೆಂದು ನನ್ನ ಅಂಬೋಣವಿಲ್ಲ; ಆದರೆ ಭಟ್ಟರೇ, ನೀವು ಈಕೆಯ ಜಾತಿ ಯಾವದು ? ಕುಲವಾವುದು ? ಎಲ್ಲಿಯವಳು ? ಮುಂತಾದ್ದರ ಬಗ್ಗೆ ಯೋಗ್ಯ ವಿಚಾರವನ್ನು ಮಾಡಿರುವಿರಾ ?

ಆಗಂತುಕನ ಆ ಪ್ರಶ್ನೆಯನ್ನು ಕೇಳಿ ಹರಭಟ್ಟನ ಕೈಕಾಲುಗಳು ಒಮ್ಮೆಲೆ ತಣ್ಣಗಾದವು. ಮೈಯೆಲ್ಲ ಜೋರೆಂದು ಬೆವೆತು ಹೋಯಿತು! ನಾಲಿಗೆಯು ಜಡವಾಯಿತು. ಮುಖವು ಕಾಡಿಗೆಯಂತೆ ಕಪ್ಪಿಟ್ಟಿತು. ಆಗ ಆತನು ಗಾಬರಿಯಿಂದ ತೊದಲಿಸುತ್ತ:—"ಇವಳು ಬ್ರಾಹ್ಮಣ ಕನ್ಯೆಯು. ವಿಧವೆಯು. ಶುದ್ಧಾಚರಣೆಯು. ಇವಳ ಕೈಯಿಂದ ಉಂಡರೇನು ದೋಷ ?"

"ಜಾತಿಯಿಂದ ಬ್ರಾಹ್ಮಣ ಕನ್ಯೆಯೂ ವಿಧವೆಯೂ ಎಂಬುದು ಸತ್ಯವೇ; ಆದರೆ ಯಾವಳು ಜಾತಿಭ್ರಷ್ಟಳಾಗಿರುವಳೋ ಅವಳಿಗೆ ಶುದ್ಧಾಚರಣೆಯೆಂದೆನ್ನಬಹುದೇ ? ಮತ್ತೂ ಅಂಥವಳ ಕೈಯಿಂದ ನಿಮ್ಮಂತಹ ಕೇವಲ ಪೂಜ್ಯರಾದ ಕಾಶೀಕ್ಷೇತ್ರಸ್ಥ ಪುರೋಹಿತರು ಉಣ್ಣಬಹುವೇ ? ನಿಮ್ಮಲ್ಲಿಗೆ ಬಂದವರಿಗೆ ಅವಳ ಅಡಿಗೆಯನ್ನು ಉಣಿಸಬಹುವೇ ?"

ಹರಭಟ್ಟನು ನಾಲಿಗೆಯನ್ನು ಕಚ್ಚುತ್ತ:—ಶಿವ-ಶಿವಾ! ಅದನ್ನುಣ್ಣುವದೆಂತು ?

"ಹಾಗಾದರೆ ಕೇಳಿರಿ:—ಇಂದಿಗೆ ಹದಿನೈದು-ಹದಿನಾರು ವರ್ಷಗಳ ಹಿಂದೆ ಈ ಸುಲೋಚನೆಯು ಮೂರು ವರ್ಷ ವಯಸ್ಸಿನ ಒಬ್ಬ ಹುಡುಗಿಯೊಡನೆ ತನ್ನ ಮನೆಯಿಂದ ಹೊರಬಿದ್ದಳು. ಇಂಥವಳಿಗೆ ಆಶ್ರಯ ಕೊಟ್ಟು, ನೀವು ನಿಮ್ಮ ಸ್ವಂತದ ಹಾಗು ಬೇರೆ ಎಷ್ಟೋ ಜನರ ಸರ್ವನಾಶಕ್ಕೆ ಕಾರಣರಾಗಿರುತ್ತೀರಿ."

"ಇದಕ್ಕೆ ಪ್ರಮಾಣವೇನು ?"

"ಪ್ರಮಾಣವನ್ನು ಕೇಳುವಿರಾ ? ಅದಕ್ಕಾಗಿ ಬೇರೆ ಕಡೆಗೆ ಹೋಗುವ ಕಾರಣವಿಲ್ಲ. ಇವಳು ಯಾರೊಡನೆ ಕುಲಗೆಟ್ಟಿರುವಳೋ, ಈಕೆಯ ಪ್ರೇಮಪಾತ್ರನಾದ ಆ ರಾಮಣ್ಣನು ನಿಮ್ಮ ಎದುರಿಗೇ ಕುಳಿತಿರುತ್ತಾನೆ."

ಹರಭಟ್ಟನು ನೀರವವಾಗಿ ಆ ಆಗಂತುಕನ ಕಡೆಗೆ ಎಷ್ಟೋ ಹೊತ್ತಿನವರೆಗೆ ಟಕಮಕವೆಂದು ನೋಡತೊಡಗಿದನು. ಈತನೇ ಸುಲೋಚನೆಯ ಪ್ರೇಮಪಾತ್ರನಾದ ರಾಮಣ್ಣನೆಂಬದು ಆಗ ಅವನಿಗೆ ತಿಳಿಯಬಂತು. ಕೂಡಲೆ ಆತನು ರಾಮಣ್ಣನನ್ನು ಕುರಿತು:—ನೀನು ಬ್ರಾಹ್ಮಣನೇ ?

ರಾಮಣ್ಣನು ತನ್ನ ಹರಕು ವಸ್ತ್ರಗಳನ್ನು ಬದಿಗೆ ಸರಿಸಿ, ತೀರ ಮಲಿನವಾದ ತನ್ನ ಜನಿವಾರವನ್ನು ಹರಭಟ್ಟನಿಗೆ ತೋರಿಸುತ್ತ ಮುಗುಳು ನಗೆಯಿಂದ:—ಅಲ್ಲ; ನಾನು ಬ್ರಾಹ್ಮಣನಲ್ಲ; ವೈಶ್ಯವರನು, ಎಂದಂದನು.

ಕೂಡಲೆ ಹರಭಟ್ಟನು ತುಸ ಸರಿದು ನಿಂತು:—ನಿನ್ನನ್ನು ನೋಡಿದರೆ ಹೊಲೆಯನಂತೆ ಕಾಣುತ್ತೀ. ಏನೇ ಇರಲಿ, ನೀನಿನ್ನು ಹೊರಡು. ನಮಸ್ಕಾರ.

ಹರಭಟ್ಟನ ಆ ನುಡಿಗೆ ಆ ಮನುಷ್ಯನು ಕೊಂಚವೂ ಸಿಟ್ಟಾಗಲಿಲ್ಲ. ಆತನೂ "ನಮಸ್ಕಾರ ನಮಸ್ಕಾರ" ಎಂದಂದು:—"ಭಟ್ಟರೇ, ತಮ್ಮ ಅನುಮಾನವು ಸರಿಯಾದದ್ದೇ. ತಾವು ನನಗೆ ಹೊಲೆಯನೆಂದರೂ ಸರಿಯೇ; ಮತ್ತೇನೆಂದರೂ ಸರಿಯೇ. ನಾನು ಇಂಥ ಜಾತಿ-ಕೋತಿಗಳನ್ನು ಗಣಿಸುವವನಲ್ಲ. ನಾನು ಪರಮಹಂಸನು-ಆರೂಢನು!"

"ನೀನು ಕೇವಲ ನಿರ್ಲಜ್ಜನು; ನಿಗರಗಟ್ಟನು; ಪಾಖಂಡಿಯು!"

"ಅದನ್ನು ನೀವು ನನಗೆ ನೆನಪು ಮಾಡಿಕೊಡುವದರಿಂದ ಇನ್ನು ಪ್ರಯೋಜನವೇನಿದೆ? ಯಾಕಂದರೆ ಈ ಮೊದಲೇ ಎಷ್ಟೋ ಜನರು ಹಾಗೆಂದು ನನಗೆ ಅಂದಿರುತ್ತಾರೆ. ನಾನು ಮೊದಲು ಏನಿದ್ದೆ ಹಾಗು ಈಗ ಏನಾಗಿರುತ್ತೇನೆ, ಇವೆಲ್ಲವನ್ನೂ ನಾನು ಚನ್ನಾಗಿ ಬಲ್ಲೆನು. ಏನಿದ್ದರೂ ನಾನೇ ಆ ವೈಶ್ಯವರ ರಾಮಣ್ಣನು!"

ಆತನ ಆ ನಾಚಿಕೆಗೇಡಿತನವನ್ನು ಕಂಡು ಹರಭಟ್ಟನು ಮತ್ತೆ ಕ್ರೋಧಸಂತಪ್ತನಾದನು; ಆದರೂ ಆತನು ತನ್ನ ಸಿಟ್ಟು ನುಂಗಿಕೊಂಡು:—"ಅದಿರಲಿ. ಹಾಗಾದರೆ ನೀನು ಈಗ ಏನು ಮಾಡಬೇಕೆಂದಿರುತ್ತೀ? ಸುಲೋಚನೆಯನ್ನು ಕರೆದೊಯ್ಯ ಬಂದಿರುತ್ತೀಯೇನು?

"ಇಲ್ಲ; ಭಟ್ಟರೇ, ಇಲ್ಲ. ನಾನು ಹಾಗೆ ಮಾಡಿದರೆ, ಪಾಪ! ನಿಮ್ಮ ವೃದ್ಧರ ಊಟ-ಪಾಟಗಳಿಗೆ ತೊಂದರೆಯಾದೀತು! ನಾನು ಅಂಥ ನರಾಧಮನಲ್ಲ."

ಹರಭಟ್ಟನು ಆತನ ಆ ಉಪಹಾಸೋಕ್ತಿಗಳನ್ನು ಹೇಗಾದರೂ ಮಾಡಿ ಸಹಿಸಿಕೊಂಡು:—ಹಾಗಾದರೆ ನಿನ್ನ ಇಚ್ಛೆಯೇನು? ನೀನು ಇಲ್ಲಿಗೆ ಬಂದೆಯೇಕೆ?

"ನನಗೆ ಬೇರೆ ಏನೂ ಬೇಕಿಲ್ಲ. ಕೇವಲ ಸಾಕಷ್ಟು-ನಾನು ಕೇಳಿದಷ್ಟು-ಹಣ ಕೊಟ್ಟರೆ ಸಾಕು. ದುಡ್ಡಿನ ಅಭಾವದ ಮೂಲಕವೇ ನಾನು ಆಗಾಗ್ಗೆ ಇಲ್ಲಿಗೆ ಬರಬೇಕಾಗುತ್ತದೆ. ಸಾವಿರೆರಡುಸಾವಿರ ರೂಪಾಯಿಗಳು

ಸಿಕ್ಕೊಡನೆಯೇ ನಾನು ಇಲ್ಲಿಂದ ಹೊರಟು ಹೋಗುತ್ತೇನೆ. ದುಡ್ಡಿಗಾಗಿ ನಾನು ಇಲ್ಲಿಗೆ ಬಂದಿರುವೆನೇ ಹೊರತು, ವಾಸಿಸಿರಲಿಕ್ಕೆಂದು ಇಲ್ಲಿಗೆ ಬಂದಿರುವದಿಲ್ಲ."

"ಇಷ್ಟು ಹಣವನ್ನು ನಿನಗೆ ಕೊಡುವವರಾರು?"

"ಕೊಟ್ಟು ಬಿಡಬೇಕೆಂದು ಯಾರಿಗೆ ಅವಶ್ಯಕತೆಯೆನಿಸುವದೋ ಅವರೇ ಕೊಟ್ಟಾರು. ನೀವು ಸ್ವತಃ ಕೊಟ್ಟೀರಿ; ಇಲ್ಲವೆ ಸುಲೋಚನೆಯ ಅಳಿಯ ಕೊಟ್ಟಾನು. ಆತನು ಹೇಗೂ ಧನವಂತನಾಗಿರುತ್ತಾನೆ."

ಆತನ ಮಾತಿನ ಇಂಬನ್ನೂ, ಧೈರ್ಯವನ್ನೂ ಕಂಡು ಹರಭಟ್ಟನು ಬೊಟ್ಟು ಕಚ್ಚಿದನು! ಈತನು ಒಳ್ಳೇ ಧೂರ್ತನೂ, ಕುಶಲನೂ ಇರುವ ನೆಂಬದು ಹರಭಟ್ಟನಿಗೆ ತಿಳಿಯಿತು. ಆಗ ಅವನು ಸೌಮ್ಯವಾಗಿಯೇ:— "ಗೃಹಸ್ಥಾ, ನಾನು ಶ್ರೀಮಂತನಲ್ಲ. ಹೇಳಿ-ಕೇಳಿ ವೈದಿಕವೃತ್ತಿಯವನು; ದರಿದ್ರನು. ಆದರಿಂದ ನಾನು ಸಾಪಿರೆರಡು ಸಾವಿರ ರೂಪಾಯಿಗಳನ್ನು ಇಂದಿನ ವರೆಗೆ ಕಣ್ಣಿನಿಂದ ಕೂಡ ನೋಡಿರುವದಿಲ್ಲ. ಅಂದಮೇಲೆ ಅಷ್ಟು ಹಣವು ನನ್ನಲ್ಲೆಲ್ಲಿಂದ ಬರಬೇಕು? ಇನ್ನು ಸುಲೋಚನೆಯ ಅಳಿಯನು ಹಣ ಕೊಡಬಲ್ಲನೆಂಬುದೇನೋ ನಿಜ; ಆದರೆ ಆತನೂ ಕೊಡುವದಿಲ್ಲ. ಯಾಕಂದರೆ ನಿನಗೆ ಆತನ ಪರಿಚಯವಿಲ್ಲ. ನೀನು ಆತನಿಂದ ಎರಡುಸಾವಿರ ಹಣ ದೊರಕಿಸುವದೊತ್ತಟ್ಟಿಗೇ ಉಳಿಯಿತು; ಅವನಿಂದ ಎರಡು ದುಡ್ಡುಗಳನ್ನು ಕೂಡ ನೀನು ದೊರಕಿಸಲಾರೆ. ನೀನು ಒಳ್ಳೇ ಬುದ್ಧಿವಂತನೆಂದು ನಿನ್ನ ತಿಳುವಳಿಕೆಯಾಗಿರಬಹುದು; ಆದರೆ ಆತನು ನಿನಗಿಂತಲೂ ಬುದ್ಧಿವಂತನಾಗಿ ರುತ್ತಾನೆ. ಆದುವರಿಂದ ನೀನು ಈ ದಾರಿಯನ್ನು ಬಿಟ್ಟು, ಹಣ ಗಳಿಸುವ ಬೇರೆ ದಾರಿಯನ್ನು ಹುಡುಕಿಕೋ."

ರಾಮಣ್ಣನು ಹರಭಟ್ಟನ ಕಡೆಗೆ ಕೆಲ ಕ್ಷಣಗಳ ವರೆಗೆ ನೀರವವಾಗಿ ನೋಡಿ ನಕ್ಕನು. ಬಳಿಕ ಆತನು:—ಹರಭಟ್ಟರೇ, ಆ ಚಿಂತೆಯು ನಿಮ ಗೇಕೆ? ಅವನಿಂದ ಹೇಗೆ ಹಣ ಹೊರಡುವದಿಲ್ಲೆಂಬದನ್ನು ನಾನು ನೋಡಿ ಕೊಳ್ಳುತ್ತೇನೆ. "....ಯತ್ನೇ ಕೃತೇ ಯದಿ ನ ಸಿದ್ಧ್ಯತಿ ಕೋಽತ್ರದೋಷಃ।"

ಹರಭಟ್ಟನು ಆತನನ್ನು ಮುಂದೆ ಮಾತಾಡಗೊಡದೆ:—ಸಾಕು ಮಾಡು ನಿನ್ನೀ ಪಾಂಡಿತ್ಯವನ್ನು!. ಆ ದೇವ ಭಾಷೆಯನ್ನು ನಿನ್ನೀ ಸುಡಗಾಡ ಮುಖದಿಂದುಚ್ಚರಿಸಿ, ಅಪವಿತ್ರವನ್ನೇಕೆ ಮಾಡುತ್ತೀ?

ವೈಶ್ಯವರನು ಒಳ್ಳೇ ಉತ್ಸುಕತೆಯಿಂದ:—ಭಟ್ಟರೇ, ನಾನು ಇನ್ನು ಇಲ್ಲಿ ನಿಲ್ಲಲಾರೆನು. ಸುಲೋಚನೆಯ ಅಳಿಯನ ಪತ್ತೆ ಹೇಳಿರಿ. ಅಂದರೆ ನಾನು ಅಲ್ಲಿಗೇ ಹೋಗಿ, ನನ್ನ ಉದ್ಯೋಗಕ್ಕೆ ಹತ್ತುತ್ತೇನೆ.

"ಸುಲೋಚನೆಯಿಂದಲೇ ಕೇಳಿಕೊಳ್ಳದನ್ನು"

"ಆಕೆಯು ಹೇಳಲಿಲ್ಲ. ನೀವೇ ಹೇಳಿರಿ."

"ನಾನೂ ಹೇಳದಿದ್ದರೆ?"

ರಾಮಣ್ಣನು ಆ ಪ್ರಶ್ನೆಯನ್ನು ಕೇಳಿ ಸಿಟ್ಟಾಗದೆ ಶಾಂತಸ್ವರದಿಂದಲೇ ನೀವು ಅದನ್ನು ಹೇಳಿಯೇ ಹೇಳುತ್ತೀರಿ. ಹೇಳದಿದ್ದರೆ ಏನು ಮಾಡುವೆ ನೆಂಬದನ್ನು ಈ ಮೊದಲೇ ನಿಮಗೆ ತಿಳಿಸಿಬಿಟ್ಟಿರುತ್ತೇನೆ. ಕ್ಷಮಿಸಿರಿ. ಬೇಗ ಹೇಳಿರಿ; ಇನ್ನು ತಡಮಾಡಬೇಡಿರಿ.

ರಾಮಣ್ಣನ ಆ ನುಡಿಯನ್ನು ಕೇಳಿ ಹರಭಟ್ಟನ ಸೊಂಡೆಯೊಣಗಿತು. ಆಗಲವನು:—ರಾಮಣ್ಣಾ, ನಾನು ನಿನಗೆ ಮಾಡಿದ ಅನ್ಯಾಯವೇನು?

"ಇಲ್ಲ; ನಿಮ್ಮಿಂದ ನನಗೇನೂ ಅನ್ಯಾಯವಾಗಿಲ್ಲ. ಅಂತೆಯೇ ಈಗ ಲಾದರೂ ನನಗೆ ಸುಲೋಚನೆಯ ಅಳಿಯನ ಪತ್ತೆ ಹೇಳಿರಿ. ಅವನ ಹೆಸರು-ವೆಸೆಗಳನ್ನು ತಿಳಿಸಿದರೆ, ನಾನು ಆ ನನ್ನ ಅಳಿಯನಲ್ಲಿಗೆ ಹೋಗಿ, ಆತನನ್ನು ಆಶೀರ್ವದಿಸುತ್ತೇನೆ; ಹಾಗು ಬಹು ದಿನಗಳಿಂದ ನೋಡದಿದ್ದ ಮಗಳನ್ನೂ ಒಮ್ಮೆ ನೋಡಿಕೊಂಡು ಬಂದಂತಾಗುತ್ತದೆ!"

ಹರಭಟ್ಟನು ಅಂತರಂಗದಲ್ಲಿ ರಾಮಣ್ಣನಿಗೆ ಹೆದರಿದ್ದರೂ, ತೋರಿಕೆ ಯಲ್ಲಿ ಮಾತ್ರ ಮತ್ತೆ ನಿಗರಗಟ್ಟನಂತೆ:—ಈ ಬಗ್ಗೆ ನಾನು ನಿನಗೆ ಸಹಾಯ ಮಾಡಲಾರೆನು. ನಿನ್ನ ಮನಸ್ಸಿಗೆ ಬಂದಂತೆ ಮಾಡು. ತಿಳಿಯದೆ ನನ್ನಿಂದ ಪಾತಕವು ಘಟಿಸಿದ್ದರೆ, ಯೋಗ್ಯ ಪ್ರಾಯಶ್ಚಿತ್ತ ತಕ್ಕೊಂಡು ಶುದ್ಧವಾಗುವೆನು. ಈ ಬಗ್ಗೆ ನಾನು ಅಂಜಬೇಕೇಕೆ? ಎಂದು ನುಡಿಯಲು,

"ನೀವು ಅಂಜುವ ಕಾರಣವಿಲ್ಲವಷ್ಟೇ? ಅಂದಮೇಲೆ ಇಂದೇ ಈ ಕಾಶೀಕ್ಷೇತ್ರದ ಪುರೋಹಿತರಲ್ಲಿ ನಿಮ್ಮ ಈ ವಿಷಯವನ್ನು ಹೇಳಿಬಿಡುತ್ತೇನೆ; ಆ ಮೇಲೆ ಏನಾಗುತ್ತದೆಯೋ ತಿಳಿಯದು! ನೀವು ಹೇಳದಿದ್ದರೂ, ಇಲ್ಲಿಯ ಬೇರೆ ಕ್ಷೇತ್ರಸ್ಥರಿಂದ ಸುಲೋಚನೆಯ ಅಳಿಯನ ಪತ್ತೆ ತಿಳಿದು, ಅಲ್ಲಿಗೆ ಹೋಗುತ್ತೇನೆ; ಹಾಗೂ ಅಲ್ಲಿಯೂ, ದೇಶ-ವಿದೇಶಗಳಲ್ಲಿಯೂ ನಿಮ್ಮ ಈ ಕೃತಿಯನ್ನು ಪ್ರಕಾಶಪಡಿಸುತ್ತೇನೆ. ಹರಭಟ್ಟರೇ, ನಮಸ್ಕಾರ, ನಾನಿನ್ನು ಹೊರಟೆನು."

ಇನ್ನು ಇವನು ನಿಶ್ಚಯವಾಗಿಯೂ ಹೊರಟನೆಂದು ತಿಳಿದು, ಹರ ಭಟ್ಟನು ಆತನ ಕೈ ಹಿಡಿದು ತನ್ನ ಬಳಿಯಲ್ಲಿ ಮತ್ತೆ ಮೊದಲಿನಂತೆ ಕುಳ್ಳಿ ರಿಸಿಕೊಂಡು, ಮೆಲ್ಲನೆ:—ಗೃಹಸ್ಥಾ, ನೀನು ನುಡಿದಂತೆ ನಡೆಯಲಿಕ್ಕೆ

ತಪ್ಪುವವನಲ್ಲೆಂಬದು ತಿಳಿಯಿತು. ಸಿಟ್ಟಾಗಬೇಡ. ನನ್ನ ಮಾತು ಕೇಳು. ಈ ಬಗ್ಗೆ ನೀನು ಇನ್ನು ಹೆಚ್ಚು ಪೃಚ್ಛಾಪೃಚ್ಛ ಮಾಡಬೇಡ. ಕೆಲ ದಿನ ತಡೆದು ಬಾ. ಆಗ ನಾನು ನನ್ನ ಕೈಲಾದದ್ದನ್ನು ನಿನಗೆ ಕೊಡುತ್ತೇನೆ, ಎಂದಂದನು.

"ಇಂದಿನಂತೆ ಅಂದೂ ಏನೂ ಅರಿಯುದವರ ವೇಷ ತಾಳಿದರೆ, ನಡೆಯು ಲಾರದೆಂಬದನ್ನು ನೆನಪಿಡಿರಿ."

ಹರಭಟ್ಟನು ರಾಮಣ್ಣನ ಕಡೆಗೆ ಕೂಡಲೆ ಟಕಮಕ ನೋಡುತ್ತ :— ಅಪ್ಪಾ, ರಾಮಪ್ಪಾ, ನೀನು ನಿಜವಾಗಿಯೂ ವೈಶ್ಯನೇನು?

"ಹೌದು ಸ್ವಾಮಿ!"

ಹರಭಟ್ಟನು ಒಂದು ನಿಟ್ಟುಸಿರುಗರೆದು ಅನ್ನುತ್ತಾನೆ:—ಮಹದಾಶ್ಚರ್ಯವು! ಒಳ್ಳೇದು. ಕೆಲ ದಿನ ತಡೆದು ಬಾ. ಈಗ್ಗೆ ಮತ್ತೆ ಗೊಂದಲವೆಬ್ಬಿಸಬೇಡ, ತಿಳಿಯಿತೇ.

"ಹಾಗೆಯೇ ಆಗಲಿ"ಂದು ನುಡಿದು, ರಾಮಣ್ಣನು ಕೆಲ ಹೆಜ್ಜೆ ನಡೆದು ಹೋಗಿ, ಮತ್ತೆ ಹಿಂದಿರುಗಿ ನಿಂತು:—ಭಟ್ಟರೇ, ಸಂಚುಗಾರವೆಂದು ಸದ್ಯಕ್ಕೆ ಎರಡು ರೂಪಾಯಿಗಳನ್ನಾದರೂ ಕೊಡಿರಿ ನೋಡೋಣ. ನನ್ನ ಹಣದ ಚೀಲವು ದಾರಿಯಲ್ಲೆಲ್ಲೋ ಕಳೆದು ಹೋಗಿವೆ, ಎಂದಂದು ಹಲ್ಲು ಕಿರಿಕಿರಿದು ನಗಲಾರಂಭಿಸಿದನು.

ಹರಭಟ್ಟನು ಸಿಟ್ಟುಬೆಂಕಿಯಾದನು. ಅದರಿಂದ ಅವನು ರಾಮಣ್ಣನ ಕಡೆಗೆ ಹೊರಳಿ ಸಹ ನೋಡದೆ, ಟೊಂಕವೊಳಗಿನ ಎರಡು ರೂಪಾಯಿಗಳನ್ನು ತೆಗೆದು ಆತನ ಕಡೆಗೆ ಬಿಸುಟಿದನು. ಕೂಡಲೆ ರಾಮಣ್ಣನು ಆ ಎರಡೂ ರೂಪಾಯಿಗಳನ್ನು ಆರಿಸಿಕೊಂಡು, ಅಲ್ಲಿಂದ ಹೊರಟು ಹೋದನು.

ರಾಮಣ್ಣನು ಹೊರಟು ಹೋದ ಎಷ್ಟೋ ಹೊತ್ತಿನ ವರೆಗೆ ಹರಭಟ್ಟನು ಅಲ್ಲಿಯೇ ಕುಳಿತು ವಿಚಾರಮಗ್ನನಾದನು. ಆಗಿನ ಸಂತಾಪಾತಿರೇಕದಿಂದ ಆತನ ಸರ್ವಾಂಗಗಳಿಗೂ ಸಹಸ್ರ ಚೇಳುಗಳು ಒಮ್ಮೆಲೆ ಕಚ್ಚಿದಷ್ಟು ಬಾಧೆಯಾಗಹತ್ತಿತು.

---

## ೫ನೇ ತರಂಗ:—ಹುಚ್ಚನ ಮಾತು ಕೇಳಿ ಹುಚ್ಚನಾಗುವದೇ ಸರಿ!

ಹರಭಟ್ಟನು ಕುಳಿತ ಸ್ಥಳದಿಂದೆದ್ದು ಒಳಗೆ ಅಡುಗೆಯ ಮನೆಗೆ ಹೋದನು. ಅಲ್ಲಿ ಸುಲೋಚನೆಯನ್ನು ಕಂಡು ಏನೆಂಬದನ್ನು ಕೇಳ ಬೇಕೆಂದನು. ಅವಳು ಅಲ್ಲಿ ಇರಲಿಲ್ಲ. ಹೊಳೆಗೆ ಹೋಗಿರಬಹುದೆಂದು ತಿಳಿದು, ಆತನು ತನ್ನ ಬೇರೆ ಕೆಲಸಕ್ಕೆ ತೊಡಗಿದನು. ಸಂಜೆಯಾದರೂ ಸುಲೋಚನೆಯ ಪತ್ತೆಯೇ ಇಲ್ಲ. ಅದರಿಂದ ಹರಭಟ್ಟನು ಚಿಂತಾಕ್ರಾಂತ ನಾದನು. ಮುಂದೆ ನಾಲ್ಕಾರು ದಿವಸಗಳು ಕಳೆದರೂ ಸುಲೋಚನೆಯ ಪತ್ತೆಯೇ ಹತ್ತಲಿಲ್ಲ ಅದರಿಂದ ಹರಭಟ್ಟನ ಹೌಹಾರಿತು! ಅವನ ಸ್ನಾನ, ಸಂಧ್ಯೆ, ಜಪ, ತಪ, ಅನುಷ್ಠಾನಗಳೆಲ್ಲ ಅಡಗಿದವು. ಮುಂಜಾವಿನಿಂದ ಸಂಜೆಯ ವರೆಗೆ ಸುಲೋಚನೆಯ ಶೋಧದಲ್ಲಿಯೇ ಆತನ ಕಾಲವು ಹರಣ ವಾಗತೊಡಗಿತು. ಇಡಿ ಕಾಶಿಯನ್ನು ಹುಡುಕಿದರೂ ಅವನಿಗೆ ಆಕೆಯ ಪತ್ತೆ ಹತ್ತದಾಗಲು, ಅವನು ಮನೆಗೆ ಹಿಂದಿರುಗಿ ಹಣೆ ಹಣೆ ಬಡಕೊಳ್ಳುತ್ತ:— ದಯಾಘನಾ, ವಿಶ್ವೇಶ್ವರಾ! ಇದೆಂಥ ಕಠಿಣ ಪ್ರಸಂಗ ತಂದೆಯಪ್ಪಾ? ಅನಾಥಳಿಗೆ ದಯೆ ತೋರಿಸಹೋಗಿ, ಇದೆಂಥ ದುರ್ನಿವಾರಕ ಪಾಪವನ್ನು ಸಂಚಯಿಸಿದೆನಪ್ಪಾ! ಎಂದು ಪ್ರಲಾಪಿಸಲಾರಂಭಿಸಿದನು.

ಹರಭಟ್ಟನ ಓಣಿಯಲ್ಲೇ ತುಸ ದೂರದಲ್ಲಿ ಮಹಾಬಳಜ್ಜನ ಮನೆ ಯಿತ್ತು. ಇತ್ತೀಚೆಗೆ ಹರಭಟ್ಟನು ಮನೆಯಲ್ಲೇ ಇರುತ್ತಿದ್ದಿಲ್ಲವಾದ್ದರಿಂದ ಮಾಬಳಜ್ಜನು ಹರಭಟ್ಟನ ಮನೆಗೆ ಬರುತ್ತಿರಲಿಲ್ಲ. ಅದರಿಂದ ಕಡೆಗೆ ಒಂದು ದಿನ ಹರಭಟ್ಟನೇ ಮಾಬಳಜ್ಜನ ಮನೆಗೆ ಹೋಗಿ, ಬಾಗಿಲಲ್ಲೇ ನಿಂತು:—ಅಜ್ಜಾ, ಅಜ್ಜಾ, ಎಂದು ಕೂಗಿದನು. ಒಳಗಿನಿಂದ ಯಾರೂ ಉತ್ತರ ಕೊಡಲಿಲ್ಲ. ಆಗ ಹಿತ್ತಲದಲ್ಲಿರಬಹುದೆಂದು ತಿಳಿದು, ಹರಭಟ್ಟನು ಹಾಗೆಯೇ ಮನೆಯನ್ನು ಹೊಕ್ಕು ಹಿತ್ತಲ ಬಾಗಿಲ ಕಡೆಗೆ ನಡೆದನು. ನಡು ಮನೆಯಲ್ಲಿ ಒಂದು ಪ್ರಶಸ್ತಾದ ಜಮುಖಾನೆಯು ಹಾಸಲ್ಪಟ್ಟಿದ್ದು, ಅದರ ಮೇಲೆ ಚದರಂಗದಾಟವು ಇಡಲ್ಪಟ್ಟಿತ್ತು. ಮಾಬಳಜ್ಜನು ಆ ಜಮುಖಾ ನೆಯ ಒಂದು ಮಗ್ಗಲಿಗೆ ಕುಳಿತು ಆಟವನ್ನಾಡುತ್ತಿದ್ದನು. ಸಂಗಡಿಗರಾರೂ ಸಿಗದ್ದರಿಂದ, ಮಾಬಳಜ್ಜನೇ ಎರಡೂ ಕಡೆಯ ಆಟಗಳನ್ನು ತಾನೇ ಆಡಿ ಕೊಳ್ಳುತ್ತಿದ್ದನು. ಅವನು ಆಟದಲ್ಲಿ ಹಾಗೆ ಕೇವಲ ತಲ್ಲೀನನಾದುದರಿಂದ, ಅವನಿಗೆ ಹರಭಟ್ಟನು ಬಾಗಿಲಲ್ಲಿ ನಿಂತು ಕೂಗಿದ ಕೂಗುಗಳು ಕೇಳಿಸಿರಲಿಲ್ಲ.

ಇಷ್ಟೇ ಅಲ್ಲ, ಹರಭಟ್ಟನು ಎದುರಿಗೆ ಬಂದು ಎಷ್ಟೋ ಹೊತ್ತಿನ ವರೆಗೆ ತನ್ನನ್ನು ಟಕಮಕ ನೋಡುತ್ತ ನಿಂತರೂ, ಆ ಏಕಾಗ್ರಚಿತ್ತದ ಮುದುಕನಿಗೆ ಆತನ ಬರುವಿಕೆಯು ಜ್ಞಾನವಾಗಲಿಲ್ಲ! ಕೆಲ ಕಾಲದ ಮೇಲೆ ಅವನಿಗೆ ಹರಭಟ್ಟನು ಬಂದ ಅರಿವು ಉಂಟಾಗಲು, ಅವನು ಒಳ್ಳೇ ಹುರುಪಿನಿಂದ:—ಹರಭಟ್ಟಾ, ನೋಡುತ್ತಿಯೇನು? ಅಗೋ, ಎದುರಿಗಿನ ಆ ಆಟವನ್ನು ನಡೆಸಿ, ಆ ವಜೀರನನ್ನು ಬದುಕಿಸು ನೋಡೋಣ, ಎಂದಂದನು.

ಕಳೆದ ಎಂಟು ದಿನಗಳಿಂದ ಹಲ ಕೆಲವು ಮನೋಘಾತಗಳಿಂದ ವಿರಕ್ತನಾಗಿದ್ದ ಹರಭಟ್ಟನು ಮಾಬಳಜ್ಜನ ಆ ಆಟಗುಳಿತನವನ್ನು ಕಂಡು, ಅವನನ್ನು ಮನಸ್ಸಿನಲ್ಲಿ ಬೈಯುತ್ತ:—ನನ್ನ ಸ್ವಂತದ ಜೀವವೇ ಉಳಿಯುದಿರುವಾಗ, ನಾನು ಆಟದೊಳಗಿನ ಈ ವಜೀರನ ಜೀವವನ್ನು ಬದುಕಿಸುವದೆಂತು? ಎಂದನು.

ಮಾಬಳಜ್ಜನಿಗೆ ಹರಭಟ್ಟನ ಮಾತಿನ ಅರ್ಥವು ಚೆನ್ನಾಗಿ ತಿಳಿಯಲಿಲ್ಲ ಅದರಿಂದ ಆತನು:—ನಿನಗೆ ಆಗಿರುವದಾದರೂ ಏನು?

"ಅಜ್ಜಾ, ನೀವು ಅಂದಿನ ಪ್ರಕರಣವನ್ನೆಲ್ಲ ಚೆನ್ನಾಗಿ ತಿಳಿದಿಲ್ಲವೇ?"

"ಅದಾವ ಪ್ರಕರಣವು? ನನಗಂತೂ ಏನೂ ಗೊತ್ತಿಲ್ಲ. ನೀನು ಅಂದು ಕೆಳಗೆ ಏತಕ್ಕೋ ಹೋದವನು, ತಿರುಗಿ ಬರಲೇ ಇಲ್ಲ. ಹರಭಟ್ಟಾ, ಅಂದಿನ ನಿನ್ನ ಆಟವು ಬಹು ಚೆನ್ನಾಗಿದ್ದಿತಲ್ಲವೆ?"

ಹರಭಟ್ಟನು ಮನಸ್ಸಿನಲ್ಲಿ ಆತನನ್ನು ಮತ್ತೆ ಬೈಯುತ್ತ:—ಅಜ್ಜಾ, ಆ ಆಟಕ್ಕೆ ಬೆಂಕೀಹಚ್ಚಿತು! ಅಂದು ಕೆಳಗೆ ನಡೆದ ಗೊಂದಲವನ್ನು ನೀನು ಕೊಂಚವೂ ಕೇಳಲಿಲ್ಲವೆ?

ಮಾಬಳಜ್ಜನು ಕೆಲಹೊತ್ತಿನ ವರೆಗೆ ಏಕಾಗ್ರಚಿತ್ತದಿಂದ ಕುಳಿತು, ಬಳಿಕ:—ಇಲ್ಲ; ನನಗೆ ಹೆಚ್ಚಾಗಿ ಏನೂ ಕೇಳಿಸಲಿಲ್ಲ. ಅಷ್ಟು ಮೆಲ್ಲಮೆಲ್ಲನೆ ಮಾತಾಡಿದರೆಲ್ಲಾದರೂ ಮುಂದಿಗೆ ಕೇಳಿಸುವದುಂಟೆ? ಆದರೆ ಅಂದಿನ ಆಟದಲ್ಲಿ ನೀನು ನಿನ್ನ ವಜೀರನನ್ನು ಉಳಿಸಿಕೊಳ್ಳುವಂತಿರಲಿಲ್ಲ. ಈ ಆಟವಾದರೂ ಕೇವಲ ಅದರಂತೆಯೇ ಇದೆ. ಈ ಆಟವಾಡಿ ನಿನ್ನ ವಜೀರನನ್ನು ಬದುಕಿಸಿಕೋ; ನೋಡೋಣ....................

ಹರಭಟ್ಟನು ಆತನನ್ನು ಹೆಚ್ಚು ಮಾತಾಡಗೊಡದೆ:—ನಿನ್ನ ಮಂತ್ರಿಯನ್ನು ಹೊಳೆಯಲ್ಲಿ ಮುಣುಗಿಸು! ನಿನ್ನನ್ನು ಕೇಳುವದಿಷ್ಟೇ, ನೀನು ಅಂದಿನ ಮಾತು-ಕಥೆಗಳನ್ನು ಕೇಳಲಿಲ್ಲವೆ? ಅದನ್ನು ಮೊದಲು ಹೇಳು.

ಆಗ ಮಾಬಳಜ್ಜನು ಆಟದ ಮೇಲಿನ ತನ್ನ ದೃಷ್ಟಿಯನ್ನು ಹರಭಟ್ಟನ ಮುಖದ ಕಡೆಗೆ ಹೊರಳಿಸಿ:—ನಾನು ಅಂದು ಏನು ಕೇಳಿದೆನೋ-ಏನೊ? ನನಗದು ನೆನಪಿಲ್ಲ.

"ಅದಿರಲಿ-ಹಾಗಾದರೆ. ನೀನು ಅಂದಿನಿಂದ ನನ್ನ ಮನೆಗೇಕೆ ಬರಲಿಲ್ಲ?"

ಮಾಬಳಜ್ಜನು ವಿಸ್ಮಯಗೊಂಡು:—ಹರಭಟ್ಟಾ, ನೀನನ್ನುವದಾದರೂ ಏನು? ನಾನು ನಿನ್ನ ಮನೆಗೆ ಬಂದಿಲ್ಲವೆ? ಅದೆಷ್ಟು ದಿನಗಳಿಂದ ನಾನು ನಿನ್ನಲ್ಲಿಗೆ ಬಂದಿಲ್ಲ? ಇಲ್ಲಿ ಕಾಶೀ ವಿಶ್ವೇಶ್ವರನ ದರ್ಶನವಾದರೂ ತಪ್ಪಬಹುದು; ಆದರೆ ನಾನು ನಿನ್ನ ಮನೆಗೆ ಬರುವದನ್ನು ತಪ್ಪಿಸಲಾರೆನು.

"ಅಜ್ಜಾ, ನೀನು ಈ ಕಾಶೀಕ್ಷೇತ್ರಕ್ಕೆ ಬಂದು ೨೦ ವರ್ಷಗಳಾಗಿರ ಬಹುದು; ಆದರೆ ನೀನು ಒಟ್ಟಿನಲ್ಲಿ ೨೦ ದಿನವಾದರೂ ವಿಶ್ವೇಶ್ವರನ ದರ್ಶನಕ್ಕೆ ಹೋಗಿರುವೆಯಾ? ದರ್ಶನವೇ ಇಷ್ಟು ಅಭಾವವಾದ ಬಳಿಕ, ಆತನ ಪೂಜೆ-ಅರ್ಚನೆಗಳಂತೂ ದೂರೇ ಉಳಿದವು" ಎಂದು ಗಂಭೀರ ಸ್ವರದಿಂದ ಹರ ಭಟ್ಟನು ಪ್ರಶ್ನೆ ಮಾಡಲು,

"ಇಲ್ಲ-ಇಲ್ಲ. ಹರಭಟ್ಟಾ, ಅಷ್ಟು ಸಾರೆ ಕೂಡ ನಾನು ದೇವ ದರ್ಶನಕ್ಕೆ ಹೋಗಿರಲಿಕ್ಕಿಲ್ಲ. ಭಟ್ಟಾ, ನನಗೆ ಅತ್ತ ಹೋಗಲಿಕ್ಕೆ ಕೂಡುವದೇ ಇಲ್ಲವಲ್ಲ! ನಾನಾದರೂ ಏನು ಮಾಡಲಿ? ಇತ್ತ ನೋಡು, ಬೆಳಿಗ್ಗೆ ಆಚೇ ಕೇರಿಯ ಶಂಭುರಾಯರ ಕೂಡ ೧-೨ ಆಟವಾಡುವೆನು. ಆ ರಾಯರು ಚದುರಂಗ ದಾಟವನ್ನು ಬಹು ಚೆನ್ನಾಗಿ ಇಡುವರು. ಆ ಮೇಲೆ ಹೊತ್ತು ನೆಟ್ಟಗೆ ಬಂದ ಮೇರೆ ಹೇಗಾದರೂ ಮಾಡಿ ಅವಸರವಸರದಿಂದ ಮನೆಯಲ್ಲೇ ಸ್ನಾನ ಮಾಡಿ, ಅಡಿಗೆ-ಊಟಗಳನ್ನು ತೀರಿಸುತ್ತೇನೆ. ಊಟ ಮುಗಿಯುವಷ್ಟರಲ್ಲಿ ಗಂಗಾಧರಪಂತರು ಆಟ ಹೂಡಿ ಸಜ್ಜಾಗಿರುವರು. ಅವರ ಆಟವನ್ನಂತೂ ವರ್ಣಿಸಲಸದಳವು! ಅವರು ಒಮ್ಮೊಮ್ಮೆ ನನ್ನ ಮೇಲೆ ಸಹ ಬಾಜಿ-ಮಾತಗ ಳನ್ನು ಮಾಡುತ್ತಿರುತ್ತಾರೆ............"

ಹರಭಟ್ಟನು ಮಾಬಳಜ್ಜನನ್ನು ಹೆಚ್ಚು ಮಾತಾಡಗೊಡದೆ:—"ಹಾಗಾ ದರೆ ಸಂಜೆಯ ಮುಂದೇನು ಮಾಡುವೆ?" ಎನ್ನಲು,

"ದೀಪ ಹಚ್ಚುವ ಮೊದಲೇ ಮುಕುಂದಭಟ್ಟರು ಆಟಕ್ಕೆ ಸಜ್ಜಾಗಿ ರುತ್ತಾರೆ. ಅವರ ಆಟದ ಚಾಲಾಕಿಯನ್ನು ನೋಡಿ, ಒಂದೊಂದು ದಿನ ನಾನು ನನ್ನ ರಾತ್ರಿಯ ಊಟ-ಪಾಟಗಳನ್ನು ಕೂಡ ಮಾಡದೆ, ಬೆಳ್ಳನೆ ಬೆಳ ಗಾಗುವ ವರೆಗೆ ಒಳ್ಳೇ ಹುರುಪಿನಿಂದ ಆಡುತ್ತಿರುತ್ತೇನೆ."

ಮಾಬಳಜ್ಜನ ಆ ವಿಚಿತ್ರ ದಿನಚರ್ಯೆಯನ್ನು ಕೇಳಿ, ಹರಭಟ್ಟನು ಗಂಭೀರ ಸ್ವರದಿಂದ:—ಅಜ್ಜಾ, ನಿನ್ನ ಮಾತಿಗೆ ನಗಬೇಕೋ-ಅಳಬೇಕೋ? ತಿಳಿಯದಾಗಿದೆ. ನಿನ್ನ ವಯಸ್ಸಾಗಿ, ನಿನ್ನ ಕುಳ್ಳು-ಕಟ್ಟಿಗೆಗಳು ಮಣಿ ಕರ್ಣಿಕಾ ಘಾಟಿಗೆ ಕೂಡ ಹೋಗಿವೆ. ಆದರೂ ನಿನ್ನ ಆಟದ ಈ ಲಕ್ಷ್ಯ ಕೊಂಚವೂ ಕಡಿಮೆಯಾಗಲೊಲ್ಲದು. ಎಷ್ಟೋ ಜನರು ತಮ್ಮ ಧನ-ಕನಕಗಳನ್ನು ತೊರೆದು, ಈ ಪುಣ್ಯಕ್ಷೇತ್ರವಾದ ವಾರಾಣಸಿಗೆ ತಮ್ಮ ಶೇಷಾ ಯುಷ್ಯವನ್ನು ಭಗವಚ್ಚಿಂತನದಲ್ಲಿಯೂ, ಗಂಗಾಸ್ನಾನ-ವಿಶ್ವೇಶ್ವರ ದರ್ಶನ ಗಳಲ್ಲಿಯೂ ಕಳೆಯಲಿಕ್ಕೆಂದು ಬರುತ್ತಿರಲು, ನೀನು ಈ ಕಾಶಿಯೊಳಗೇ ಅಖಂಡವಾಗಿದ್ದು, ನರಕವೊಳಗಿನ ಕೀಟಕದಂತೆ ಇನ್ನೂ ಈ ಭೌತಿಕ ವ್ಯಾಪಾರದಲ್ಲಿಯೇ ಮಗ್ನನಾಗಿರುವೆಯಲ್ಲ! ಅಜ್ಜಾ, ಇಷ್ಟರಲ್ಲೇ ನೀನು ಗತಿ ಸಿದರೆ, ಈ ನಿನ್ನ ಚದರಂಗಗಳು ನಿನ್ನ ಕೂಡ ಪರಲೋಕಕ್ಕೆ ಬರುವವೆ?

ಮಾಬಳಜ್ಜನು ಖೊಖ್ಖೊಕ್ಕೆಂದು ಗಟ್ಟಿಯಾಗಿ ನಕ್ಕು:—ಇಲ್ಲ, ಹರಭಟ್ಟಾ, ಈ ನನ್ನ ಚದರಂಗಗಳು ನನ್ನ ಕೂಡ ಬರಲಾರವು. ಇನ್ನು ಪರಲೋಕದ ಸ್ಥಿತಿಯ ಬಗ್ಗೆ ಹೇಳುವದೆಂದರೆ, ಯಾವಾಗ ಕರೆ ಬರುವದೋ, ಆಗ ನಿರಾಲೋಚನೆಯಿಂದ ತಟ್ಟನೆ ತೆರಳಲಿಕ್ಕೆ ನಾನು ಸಿದ್ಧವಾಗಿಯೇ ಇರು ತ್ತೇನೆ. ಆ ಬಗ್ಗೆ ಚಿಂತಿಸುತ್ತ ಕೂಡ್ರುವ ಕಾರಣವೇನು?

ಇಹಲೋಕದ ಯಾವ ವಿಷಯವಾಗಿಯೂ ನಿನಗೆ ಚಿಂತೆಯಿಲ್ಲವೆ?

"ಇಲ್ಲ-ಇಲ್ಲ, ಖಂಡಿತವಾಗಿಯೂ ಇರುವದಿಲ್ಲ. ಯಾವ ದಿವಸ ನನ್ನ ಪ್ರಿಯ ಮಡದಿಯಾದ ಕಮಲೆಯು ಹೊರಟು ಹೋದಳೋ, ಅಂದೇ-ಅವಳ ಕೂಡವೇ-ನನ್ನಲ್ಲಿಯ ಚಿಂತೆ, ಭಯ, ಶಂಕೆ ಮೊದಲಾದ ಉಪದ್ರವಗಳೆಲ್ಲ ಹೊರಟು ಹೋಗಿರುತ್ತವೆ. ಇನ್ನು ನಾನು ಆ ಬಗ್ಗೆ ಚಿಂತಿಸಿಯಾದರೂ ಮಾಡುವದೇನು?........" ಎಂದು ನುಡಿಯುತ್ತಿರಲು, ಮಾಬಳಜ್ಜನ ಕಣ್ಣು ಗಳಿಂದ ಟಪಟಪನೆ ನೀರುದುರಹತ್ತಿದವು.

ಹರಭಟ್ಟನು ಅವನನ್ನು ಮತ್ತೆ ಮಾತಾಡಗೊಡದೆ:—ಅಜ್ಜಾ, ಸಾಕು ಮಾಡು, ನಿನ್ನೀ ಸಂಗತಿಯನ್ನು. ಈಗ ನೀನು ನನ್ನ ಮಾತಿನ ಕಡೆಗೆ ಲಕ್ಷ್ಯಗೊಡುವಿಯಾ?

ಹೇಳು, ಅದೇನೆಂಬದನ್ನು.

ಹರಭಟ್ಟನು ಮಾಬಳಜ್ಜನಿಗೆ ತನ್ನ ಮನೆಯಲ್ಲಿ ನಡೆದ ಅಂದಿನ ದಿನದ ಆ ಸಂಗತಿಯನ್ನು ವಿವರಿಸಿ ಹೇಳಿದನು; ಹಾಗು ಅಜ್ಜಾ, ಇದಕ್ಕೆ ಮುಂದೇ ನುಪಾಯ ಮಾಡಬೇಕೆಂಬದನ್ನು ಹೇಳಬಾರದೆ? ಎಂದು ಕೇಳಿದನು.

ಹರಭಟ್ಟನ ಆ ಸಂಗತಿಯನ್ನು ಕೇಳಿ ಕೇಳಿದಂತೆ, ಸದಾ ಪ್ರಫುಲ್ಲ ವದನನಾದ ಮಾಬಳಜ್ಜನ ಮುಖಬಣ್ಣವು ಬಿಳುಪೇರಿತು. ಆಗ ಆತನು ನಡುಗುವ ದನಿಯಿಂದ:—ಹರಭಟ್ಟಾ, ಅದು ಕುಕಲ್ಪನೆಯಿರಬಹುದು; ಸುಲೋಚನೆಯು ಸಾವಿತ್ರೀ ಸತಿಯಂತೆ ಪರಮ ಪವಿತ್ರಳಾಗಿ ತೋರುತ್ತಿದ್ದಳು.

ನನ್ನ ತಿಳುವಳಿಕೆಯೂ ಹಾಗೆಯೇ ಆಗಿತ್ತು; ಆದರೆ ಸ್ತ್ರೀಯರ ನೆಲೆ ಹತ್ತದೆಂದು ಅನ್ನುತ್ತಾರಲ್ಲ! ಕಡೆಗೆ ಅದೇ ನಿಜವಾದಂತಾಯಿತು.

ಛೀ-ಛೀ, ಹಾಗೆನ್ನಕೂಡದು. ಮನುಷ್ಯರೆಲ್ಲರೂ ಪುಣ್ಯ-ಪಾಪಗಳನ್ನು ಆಚರಿಸುತ್ತಿರುವರು; ಆ ಪಾಪ-ಪುಣ್ಯಗಳ ವಿಚಾರದಲ್ಲಿ ಸ್ತ್ರೀ-ಪುರುಷರೆಂಬ ಪ್ರಭೇದವಿರುವದಿಲ್ಲ. ಹರಭಟ್ಟಾ, ನಿನ್ನ ತಾಯಿಯ ಸಂಗತಿಯು ನೆನಪಿಲ್ಲವೊ? ಅದನ್ನೆಲ್ಲ ಒಮ್ಮೆಲೆ ಮರತೇ ಬಿಟ್ಟೆಯೇನು?

ಮಾಬಳಜ್ಜನ ಆ ನುಡಿಯನ್ನು ಕೇಳಿ, ಹರಭಟ್ಟನು ಲಜ್ಜಿತನೂ, ಮುಖಭಂಗಿತನೂ ಆದನು. ಅದರಿಂದ ಅವನು ಕೆಲ ಕಾಲದ ವರೆಗೆ ಕೆಳಮೋರೆ ಮಾಡಿಕೊಂಡು ಕುಳಿತು, ಬಳಿಕ:—ಆದರೆ ಈಗಂತೂ ನನ್ನ ಜಾತಿ ಕೆಡುವ ಪ್ರಸಂಗ ಬಂದಿದೆಯಲ್ಲ? ಇದಕ್ಕೇನು ಮಾಡುವದು? ಹೇಳು.

ಸಾಮಾನ್ಯವಾದ ಪ್ರಾಯಶ್ಚಿತ್ತದ ಶಾಸ್ತ್ರವನ್ನು ತೀರಿಸಿ ಬಿಡು. ಗೊತ್ತಿಲ್ಲವೆ ಘಟಿಸಿದ ಪಾಪಗಳಿಗೆ ಪ್ರಾಯಶ್ಚಿತ್ತವಿಲ್ಲವೆ?

ಇರದೇನು? ಆದರೆ ಇಲ್ಲಿಯ ಜನರು ನನ್ನನ್ನು ಶುದ್ಧಿಗೊಳಿಸಿಕೊಳ್ಳುವರೇ? ಅವರು ನನ್ನನ್ನು ತಮ್ಮಲ್ಲಿಯ ಹವ್ಯ-ಕವ್ಯಗಳಿಗೆ ಕರೆಯುವರೆ?

ಜನರು ಕರೆಯದಿದ್ದರೇನಾಯಿತು?............

ಮಾಬಳಜ್ಜನ ಆ ಸ್ವಾಭಿಮಾನಶೂನ್ಯವಾದ ನುಡಿಯನ್ನು ಕೇಳಿ, ಹರಭಟ್ಟನು ಕ್ರೋಧಗೊಂಡು:—ಅಜ್ಜಾ, ಮನುಷ್ಯನು ಸ್ವಲ್ಪ ಸಾರಾಸಾರ ವಿಚಾರ ಮಾಡಿ ಮಾತಾಡಬೇಕಲ್ಲವೆ? ಬಾಯಿಗೆ ಬಂದಂತೆ ಬೊಗಳಿದರಾಗುವದೇ?

ವಿಚಾರಪೂರ್ವಕವಾಗಿಯೇ ನುಡಿದಿರುತ್ತೇನೆ. ಹರಭಟ್ಟಾ, ನೀನು ಇನ್ನು ಹುಡುಗನಲ್ಲ. ನೀನೂ ಐವತ್ತರ ಮನೆಗೆ ಬಂದಿರುತ್ತೀ. ಇದು ವರೆಗೆ ನೀನು ಜಾತಿಯಲ್ಲಿದ್ದು, ಇನ್ನು ಉಳಿದಿರುವ ಅಲ್ಪ ಸ್ವಲ್ಪ ವಯಸ್ಸಿನಲ್ಲಿ ನಿನ್ನ ಜಾತಿಯು ನಿನ್ನನ್ನು ಬಿಟ್ಟು ಹೋದರೆ, ಆ ಬಗ್ಗೆ ನೀನು ಅಷ್ಟೊಂದು ಹಳಹಳಿಸಬೇಕೇಕೆ?

ಜಾತಿಚ್ಯುತನಾದರೆ ಹಳಹಳಿಸಬೇಡವೆ? ಹಾಗಾದರೆ, ನನ್ನ ಬ್ರಾಹ್ಮಣಿಕೇ ಧರ್ಮವೆಲ್ಲ ಹಾಳಾಗುವದು. ನಾನು ಪರಲೋಕದಲ್ಲಿ ಆ ಬಗ್ಗೆ ಏನೆಂದು ಜವಾಬು ಕೊಡಬೇಕು?

"ಒಬ್ಬ ಅನಾಥಳಿಗೆ ಆಶ್ರಯ ಕೊಟ್ಟದ್ದರಿಂದ, ನನ್ನ ಅವಸ್ಥೆಯು ಹೀಗಾಯಿತೆ"ಂದು ಹೇಳಿದರೆ ಆಗದೇ?

ಹರಭಟ್ಟನು ವಿಚಾರಮಗ್ನನಾದನು. ಮಾಬಳಜ್ಜನ ಆ ಸಲಹೆಯು ಅವನಿಗೆ ಕೊಂಚವೂ ಸಮ್ಮತವಾಗಲಿಲ್ಲ. ಅದರಿಂದ ಕೆಲ ಕ್ಷಣಗಳ ನಂತರ ಆತನು:—ಮಾಬಳಜ್ಜಾ, ಹಾಗಾದರೆ ಆ ರಾಮಣ್ಣನಿಗೆ ಸುಲೋಚನೆಯ ಅಳಿಯನಾದ ಚಂದ್ರಕಾಂತನ ಪತ್ತೆಯನ್ನು ಹೇಳಬೇಡವೆ? ಎಂದು ಪ್ರಶ್ನೆ ಮಾಡಲು,

ಬೇಡ; ಎಂಥ ಕಠಿಣ ಪ್ರಸಂಗಬಂದರೂ ನೀನು ಆ ದುಷ್ಕೃತ್ಯಕ್ಕೆ ಮನಸ್ಸು ಮಾಡಬೇಡ. ಒಬ್ಬ ಸೆರೆಗುಡುಕ ಬದ್‌ಮಾಷನು ತನ್ನ ದ್ರವ್ಯ ಪಿಪಾಸೆಗಾಗಿ ನಿನ್ನನ್ನು ಪೀಡಿಸಲು, ಆತನಿಗೆ ಅಂಜಿ, ನೀನು ಆ ಸಭ್ಯನ-ಚಂದ್ರಕಾಂತನ-ಪತ್ತೆ ಹೇಳಿ, ಇವನಿಗೆ ಸಹಾಯಕನಾಗುತ್ತಿಯೇನು?

ನಾನು ಹಾಗೆ ಮಾಡದಿದ್ದರೆ, ಆತನು ನನ್ನ ಸರ್ವಸ್ವವನ್ನೂ ನಾಶಗೊಳಿಸುತ್ತಿರುವನಲ್ಲ! ಅದರಿಂದ ನನ್ನ ಮನೆಗೆ ಒಬ್ಬ ಯಾತ್ರಿಕನೂ ಬರಲಾರನು. ಆ ಬಳಿಕ ನಾನೇನು ತಿನ್ನಲಿ-ಮಣ್ಣು!

"ಆ ಬಗ್ಗೆ ನೀನು ಒಂದಿಷ್ಟೂ ಚಿಂತಿಸಬೇಡ. ನಾನು ಸರಕಾರದಿಂದ ತಿಂಗತಿಂಗಳಿಗೆ ದೊರಕಿಸುವ ಇಪ್ಪತ್ತು ರೂಪಾಯಿ ಪೆನ್ಶನ್ನಿನ ಹಣದಲ್ಲಿ ನಾನೂ ನೀನೂ ಇಬ್ಬರೂ ಕೂಡಿಯೇ ಉಪಜೀವಿಸೋಣ. ಆ ಹಣದಲ್ಲಿ ನಾವಿಬ್ಬರೂ ಸುಖದಿಂದ ಉಂಡುಟ್ಟು, ನಮ್ಮ ಮಿಕ್ಕ ವೇಳೆಯನ್ನೆಲ್ಲ ನಮ್ಮ ಪ್ರೀತಿಯ ಚದರಂಗದಾಟದಲ್ಲಿ ಕಳೆಯೋಣ ನಮಗೆ ಮುಂದಿಯ ಮನೆಯ ಹೊಸ್ತಿಲಕ್ಕೆ ಹೋಗುವ ಪ್ರಸಂಗವೇನಿದೆ?"

ಮನಸ್ಸು ಕ್ರೋಧ ಸಂತಪ್ತಗೊಂಡಿದ್ದರೂ, ಕೇವಲ ಬಾಲಕನಂತಹ ಮಾಬಳಜ್ಜನ ಆ ನುಡಿಯನ್ನು ಕೇಳಿ, ಹರಭಟ್ಟನು ಗಟ್ಟಿಗಟ್ಟಿಯಾಗಿ ನಕ್ಕನು. ಬಳಿಕ ಅವನು:—ಅಜ್ಜಾ, ನಾನು ವಯಸ್ಸಿನಿಂದ ನಿನಗಿಂತ ಚಿಕ್ಕವನಿದ್ದು, ನಿನ್ನ ಸಂರಕ್ಷಣದ ಭಾರವನ್ನು ಪ್ರಸಂಗವಶಾತ್ ನಾನು ವಹಿಸುವದೇ ಲೋಕಾರೂಢಿಯ ಮಾತು; ಆದರೆ ಅದನ್ನೆಲ್ಲ ಬಿಟ್ಟು, ಹೆಂಡಿರು-ಮಕ್ಕಳಾರೂ ಇರದ ನಿನ್ನಂತಹ ವೃದ್ಧನ ಪೆನ್ಶನ್ನಿನ ಹಣದಿಂದ ನಾನು ಉಪಜೀವಿಸುವದು ನ್ಯಾಯಸಮ್ಮತವಾದುದಲ್ಲ. ಮೇಲಾಗಿ "ಸೂಳೆಯ

ಪಾಪ ಸಂನ್ಯಾಸಿಗೆ ಬಡಿಕೊಂಡಿತೆ”ಂಬ ಗಾದೆಯಂತೆ, ಸುಲೋಚನೆಯ ಪಾಪಕ್ಕಾಗಿ ನಾನೇಕೆ ಜಾತಿಭ್ರಷ್ಟನಾಗಬೇಕು? ಜನರಿಂದ ಇಲ್ಲದ ಲಾಂಛನವನ್ನು ನಾನೇಕೆ ತಂದುಕೊಳ್ಳಬೇಕು? ಅದಕ್ಕಿಂತ ನಾನು ಆ ವೈಶ್ಯರ ರಾಮಣ್ಣನಿಗೆ ಸುಲೋಚನೆಯ ಆಳಿಯನ........

ಸರಿ ಸರಿ. ಆ ನೀಚನಿಗೆ ಆತನ ಪತ್ನಿ ಹೇಳಿ, ಆ ದರಿದ್ರ ಕನ್ಯೆಯನ್ನು ಆಕೆಯ ಗಂಡ, ಸಂಸಾರ, ಸನ್ಮಾನ ಮುಂತಾದವುಗಳಿಂದ ವಂಚಿತಳನ್ನಾಗ ಮಾಡಿ, ಈ ನಿನ್ನ ಜೀರ್ಣ-ಶೀರ್ಣ ದೇಹವನ್ನು ನರಿ-ನಾಯಿಗಳು ಸಿಕ್ಕಿದ್ದನ್ನು ತಿಂದು ಬಾಳುವಂತೆ, ಯಾತ್ರಿಕರು ಕೊಡುವ ಹಣದಿಂದ ಪೋಷಿಸುತ್ತ, ಈ ಕಾಶಿಯಲ್ಲಿ ಕಾಲಹರಣ ಮಾಡಬೇಕೆಂದಿರುವಿಯೊ? ಹೀಗೆಯೇ ನಿನ್ನ ಇಚ್ಛೆಯಾಗಿದ್ದರೆ ಅದನ್ನು ನನ್ನೆದುರಿಗೇಕೆ ಹೇಳಬಂದೆ? ನನ್ನ ಅಭಿಪ್ರಾಯವನ್ನೇ ಕೇಳಬಂದಿರುವೆಯಾದ್ದರಿಂದ ನಾನು ನಿನಗೆ ಹೇಳುತ್ತೇನೆ ಕೇಳು:—“ಶ್ರೀ ವಿಶ್ವೇಶ್ವರ-ಅನ್ನಪೂರ್ಣೆಯರ ಸಾನ್ನಿಧ್ಯವಾದ ಈ ಕಾಶೀಕ್ಷೇತ್ರದಲ್ಲಿದ್ದು, ಯಾವಳೊಬ್ಬ ಬಡ ಅನಾಥ ಸತಿಯನ್ನು ಮಹಾಕಷ್ಟಕ್ಕೆ ಗುರಿಮಾಡುವದು ನಿನ್ನಂಥವನಿಗೆ ಸರ್ವಥಾ ತಕ್ಕದ್ದಲ್ಲ. ಇದರಿಂದ ನಿನ್ನ ಕಲ್ಯಾಣವೆಂದಿಗೂ ಆಗಲಿಕ್ಕಿಲ್ಲ. ಇದರ ಮೇಲೆ ನಿನ್ನ ಮನಬಂದಂತೆ ನೀನು ನಡೆಯಬಹುದು.”

ಮಾಬಳಜ್ಜನ ಆ ನುಡಿಯನು ಕೇಳಿ ಸಿಟ್ಟಿನಿಂದ ಹರಭಟ್ಟನು:— ಅಜ್ಜಾ, ನೀನು ನನ್ನನ್ನು ಶಪಿಸುತ್ತಿರುವೆಯಾ?

ಇಲ್ಲಪ್ಪಾ ಇಲ್ಲ. ನೀನು ಕಾಶಿಯ ಪಂಡಿತನು-ಪುರೋಹಿತನು; ವಿಶ್ವೇಶ್ವರನ ಪ್ರತಿನಿಧಿಯು. ನನ್ನಂಥ ಪಿಸುಣನ ಶಾಪ-ಸಂತಾಪಗಳಿಂದ ನಿನಗೇನಾಗಬೇಕಾಗಿದೆ? ಆ ಅಂಜಿಕೆಯು ನಿನಗೆ ಇಲ್ಲವೇ ಇಲ್ಲ. ಅಂತೆಯೇ ನೀನು ಹೀಗೆ ಅಕರ್ತವ್ಯವಾದ ಕರ್ತವ್ಯ ಕರ್ಮಕ್ಕೆ ಕೈನೀಡಲೆತ್ನಿಸುವೆ; ಆದರೆ ಹರಭಟ್ಟಾ, ತಮ್ಮಾ, ಆ ಕೆಲಸವು ಬಹು ಅನಿಷ್ಟಕರವಾದುದು. ಪ್ರತ್ಯಕ್ಷ ಯಮನು ಸತೀ-ಸಾವಿತ್ರಿಗೆ ಅಂಜಿ ಓಡಿ ಹೋದನೆಂಬ ಪೌರಾಣಿಕ ಕಥೆಯನ್ನು ಈ ಪ್ರಸಂಗದಲ್ಲಿ ನಿನಗೆ ನೆನಪು ಮಾಡಿಕೊಡುತ್ತೇನೆ. ನಾನೂ ನೀನೂ ಬಹು ದಿನಗಳ ವರೆಗೆ ತೊಡೆಗೆ ತೊಡೆ ಹಚ್ಚಿ ಕುಳಿತು, ಚದರಂಗವನ್ನಾಡಿರುವೆವಾದ್ದರಿಂದ, ಹಾಗು ನಿನ್ನನ್ನು ನಾನು ಅಂತಃಕರಣಪೂರ್ವಕ ಪ್ರೀತಿಸುತ್ತಿರುವದರಿಂದ ನಿನಗೀ ಹಿತೋಕ್ತಿಗಳನ್ನು ತಿಳಿಸಿರುತ್ತೇನೆ.

ಹರಭಟ್ಟನು ಏನೂ ಉತ್ತರವನ್ನೀಯದೆ, ಮುಸುಡೆಯನ್ನು ಕರ್‍ರಗೆ ಮಾಡಿಕೊಂಡು ಎದ್ದು ನಿಂತನು.

ಆಗ ಮಾಬಳಜ್ಜನು ಅವನನ್ನುದ್ದೇಶಿಸಿ:—ತಮ್ಮಾ, ನನ್ನ ಮೇಲೆ ಸಿಟ್ಟಾಗಬೇಡಪ್ಪಾ. ನಡೆದ ಸಂಗತಿಯನ್ನೆಲ್ಲಾ ಮರೆತು ಬಿಟ್ಟು, ಮೊದಲಿನಂತೆ ಆಗಾಗ್ಗೆ ಆಟಕ್ಕೆ ಬರುತ್ತಿರು.

"ಈ ಹುಚ್ಚನ ಮಾತು ಕೇಳಿದರೆ ಹುಚ್ಚನಾಗುವದೇ ಸರಿ!" ಹೀಗೆಂದು ನುಡಿದು, ಹರಭಟ್ಟನು ತನ್ನ ಮನೆಗೆ ಹಿಂದಿರುಗಿದನು.

---

## ೬ನೇ ತರಂಗ:—ಕಾಗದವೆಲ್ಲಿ? ನೋಡೋಣ.

ಹರಭಟ್ಟನಿಗೆ ಆ ರಾತ್ರಿ ನಿದ್ದೆಯೇ ಹತ್ತಲಿಲ್ಲ. ವಿಚಾರ ತರಂಗಗಳಲ್ಲಿ ಅವನು ಮುಣುಮುಣುಗಿ ಎದ್ದನು. ಬೆಳಗಿನ ಝಾವದಲ್ಲಿ ಅವನು ಒಂದು ಮಾತನ್ನು ನಿಶ್ಚಯಿಸಿ, ಅದರಂತೆ ಚಂದ್ರಕಾಂತನ ಕಕ್ಕನಾದ ಮಾರ್ತಂಡ ರಾಯನಿಗೊಂದು ಕಾಗದ ಬರೆದು ಕಳಿಸಿದನು. ಅದರಲ್ಲಿ "ನಿಮ್ಮ ಚಂದ್ರ ಕಾಂತನು ಇಲ್ಲಿಗೆ ಬಂದಾಗ ಸ್ವೇಚ್ಛೆಯಿಂದ ಒಬ್ಬ ವೇಶ್ಯಾ ಪುತ್ರಿಯನ್ನು ಲಗ್ನವಾಗಿ, ಅವಳನ್ನು ನಿಮ್ಮಲ್ಲಿಗೆ ಕರೆತಂದಿರುತ್ತಾನೆ"ಂಬ ಸಂಗತಿಯನ್ನು ಒಡೆದು ಕಾಣುವ ಹಾಗೆ ವಿವರಿಸಿದನು.

ಆ ಕಾಗದ ಮಾರ್ತಂಡರಾಯನ ಹಸ್ತಗತವಾದ ಬಳಿಕ ಕೇಳುವದೇನು? ಮೊದಲೇ ಚಂದ್ರಕಾಂತನ ಮೇಲೆ ಹಲ್ಲು ಕಡಿಯುತ್ತಿದ್ದ ಆತನು ಹುರುಪುಗೊಂಡನು; ಆದರೆ ಆ ಸಂಗತಿಯಿಂದ ಅವನಿಗೆ ಸುಖವೇ ಆಗಿರಲಿ-ದುಃಖವೇ ಆಗಿರಲಿ, ಅದು ಬಹು ಭಯಾನಕವಾಗಿತ್ತೆಂಬದಕ್ಕೆ ಸ್ವಲ್ಪವೂ ಅನುಮಾನ ವಿರಲಿಲ್ಲ. ಅದರಿಂದ ಅವನು ಆ ಬಗ್ಗೆ ಮುಂದೇನು ಮಾಡಬೇಕೆಂಬದನ್ನು ನಿರ್ಧರಿಸಲಾರದೆ, ತನ್ನ ಹೆಂಡತಿಯನ್ನು ಏಕಾಂತದಲ್ಲಿ ಕರೆದು, ಅವಳಿಗೆ ಆ ಕಾಗದವನ್ನೋದಿ ತೋರಿಸಿದನು. ಬಳಿಕ ಆತನು ಒಳ್ಳೇ ಆತ್ಮಪ್ರೌಢಿಯಿಂದ ಹೆಂಡತಿಯನ್ನು ಕುರಿತು:—"ಆತನು ನನ್ನ ಮಾತು ಕೇಳಿದ್ದರೆ, ಹೀಗಾಗುತ್ತಿತ್ತೇ? ಇಲ್ಲ,-ಎಂದಿಗೂ ಇಲ್ಲ; ಈ ತರದ ನಿಂದ್ಯ ಕೆಲಸವೆಂದೂ ಆಗುತ್ತಿರಲಿಲ್ಲ. ಹೇಗೆಯೇ ಆಗಿರಲಿ, ಈ ಸಂಗತಿಯನ್ನು ಈಗಲೆ ಬಹಿರಂಗಪಡಿಸಲಾಗದು. ಚೆನ್ನಾಗಿ ವಿಚಾರಮಾಡಿಯೇ ಮುಂದೆ ಮಾಡತಕ್ಕದ್ದನ್ನು ಮಾಡಬೇಕಾಗಿದೆ" ಎಂದು ಹೇಳಿದನು.

ಮಾರ್ತಂಡರಾಯನ, ಅಂದಂತೆ, ಆ ಸಂಗತಿಯ ಬಗ್ಗೆ ಪೂರ್ವಾಪರ ವಿಚಾರ ಮಾಡಲಿಕ್ಕೆ ನಾಲ್ಕಾರು ದಿನಗಳ ಅವಕಾಶವಾದರೂ ಬೇಕೇ ಬೇಕಾಗಿತ್ತು; ಆದರೆ ಹೆಂಗಸರ ಬಾಯಲ್ಲಿ ಮಾತು ನಿಲ್ಲುವವೇ? ಆತನ ಆ "ಯಾರ

ಮುಂದೂ ಹೇಳಬಾರದೆ"ಂಬ ಮಾತಿನ ಪ್ರಸ್ತಾಪವನ್ನೇ ಮುಂದೆ ಮಾಡಿ ಮಾಡಿ, ಮಾರ್ತಂಡರಾಯನ ಹೆಂಡತಿಯು ತನ್ನ ನಾಲ್ಕಾರು ಜನ ಜೀವದ ಗೆಳತಿಯರೆದುರಿಗೆ ಅಂದು ಸಂಜೆಯೊಳಗಾಗಿಯೇ ಅದನ್ನು ಹೇಳಿಬಿಟ್ಟಳು! ಅದೇ ಸಂಗತಿಯು ಅಂದು ಅವರ ಮನೆಯ ಲಗ್ನಕ್ಕೆಂದು ಬಂದಿದ್ದ ಶಾರದೆಯ ನೆರೆಮನೆಯ ಆ ವೃದ್ಧ ಗೆಳತಿಗೂ ಗೊತ್ತಾಗಿತ್ತು. ಅಂತೇ ಅವಳು ಮರುದಿನ ಶಾರದೆಯ ಬಳಿಗೆ ಹೋಗಿ, ಆಕೆಯನ್ನು ಕುರಿತು ಚಂದ್ರಕಾಂತನು ನಿನ್ನನ್ನು ಎಷ್ಟರಮಟ್ಟಿಗೆ ಪ್ರೀತಿಸುತ್ತಿರುವನೆಂಬದನ್ನು ಕೆದರಿ ಕೆದರಿ ಕೇಳಿದ್ದಳು. ಚಂದ್ರಕಾಂತನ ಪ್ರೀತಿಯು ಹೆಚ್ಚಳದ ಮಾನದಿಂದ, ಆ ಸುದ್ದಿಯು ಯೋಗ ದಿಂದ ಶಾರದೆಗೆ ಪ್ರಾಪ್ತವಾಗಬಹುದಾಗಿದ್ದ ಆಗಾಮಿ ಅನಿಷ್ಟಕರ ಪ್ರಸಂಗವು ಸಂಕೋಚಗೊಳ್ಳತಕ್ಕದ್ದೆಂದು ಆ ವೃದ್ಧಳ ಭರವಸೆಯಾಗಿತ್ತು.

ಆಗ ಆ ಸಂಗತಿಯ ಬಗ್ಗೆ ಪ್ರತಿಯೊಬ್ಬರೂ ಬಹು ಮೆಲ್ಲಮೆಲ್ಲನೆ ಮಾತ ನಾಡುತ್ತಿದ್ದರು. ಎಲ್ಲರ ಮುಖ ಭಾವ ಮತ್ತು ಕಣ್ಣುಗಳ ಹೊಳಪುಗಳ ಮೇಲಿಂದ ಅವರೆಲ್ಲರ ಅಂತರಂಗದಲ್ಲಿಯೂ ಒಂದು ಬಗೆಯ ಪೈಶಾಚಿಕ ಆನಂದದ ಪ್ರವಾಹವು ಪ್ರವಹಿಸತೊಡಗಿದಂತೆ ತೋರುತ್ತಿತ್ತು. ಅವರೆಲ್ಲರ ಮುಖಭಾವದಲ್ಲಿ ದೀರ್ಘನಿಶ್ವಾಸ ಮತ್ತು ದುಃಖಪ್ರಕಾಶವಂತೂ ವ್ಯಕ್ತವಾಗೇ ಆಗುತ್ತಿತ್ತು; ಅಲ್ಲದೆ ಶಾರದೆಯ ಭಾಗ್ಯರವಿಯು ತೇಜಗುಂದುವದನ್ನು ಕಂಡು "ಅಹಾ! ಅಯ್ಯೋ!!" ಎಂದು ನುಡಿದು, ತಾವು ಆಕೆಯ ವಿಷಯವಾಗಿ ಒಳ್ಳೇ ಕನಿಕರ ತಾಳುತ್ತಿರುವೆವೆಂದು ಅವರೆಲ್ಲರೂ ಪರಸ್ಪರರಿಗೆ ಚೆನ್ನಾಗಿ ವ್ಯಕ್ತಪಡಿ ಸುವ ಕಷ್ಟದ್ಯೋತಕ ಆವಿರ್ಭಾವಗಳನ್ನು ಕೈಕೊಳ್ಳುತ್ತಿರುವರು. ಕಳೆದ ಎರಡು ಮೂರು ರಾತ್ರಿಗಳಲ್ಲಿ ಅವರಾರಿಗೂ ಚೆನ್ನಾಗಿ ನಿದ್ದೆ ಬಂದಿರಲಿಲ್ಲ. ಆ ಮಾತಿಗೆ ಒಂದು ವಾರವು ಕಳೆದು ಹೋಯಿತು; ಆದರೂ ಅದು ಪರಿಸ್ಫುಟ ಗೊಳ್ಳಲಿಲ್ಲ. ಹೊಗೆ ಹೊರಡುವ ಅಗ್ನಿಯಂತೆ ಅದು ಒಳಗಿಂದೊಳಗೇ ಪುಟುವು ಗೊಳ್ಳುತಲಿತ್ತು. ಆ ಮಾತಿನ ಪರಿಸ್ಫೋಟವು ಇನ್ನೂ ಬರಿಯ ಹೆಂಗಸರಲ್ಲೇ ನಡೆದಿತ್ತಾದ್ದರಿಂದ ಅದು ಅಷ್ಟೊಂದು ಪ್ರಜ್ವಲನ ಹೊಂದಿರ ಲಿಲ್ಲ. ಗಂಡಸರು ಸರ್ವಸಾಮಾನ್ಯವಾಗಿ ತಮ್ಮ ಉದ್ಯೋಗದಲ್ಲೇ ತೊಡಗುವ ವರು. ಅವರಿಗೆ ಇಂಥ ಕ್ಷುಲ್ಲಕ ಸಂಗತಿಗಳು ಒಮ್ಮೆಲೆ ಗೊತ್ತಾಗುವದೇ ಕಡಿಮೆ. ಒಂದು ವೇಳೆ ಗೊತ್ತಾದರೂ ತಮ್ಮ ಸಂತತವಾದ ಉದ್ಯೋಗತತ್ಪರತೆಯ ಮೂಲಕ ಚಂದ್ರನಾಥನನ್ನು ಬಹಿಷ್ಕೃತಗೊಳಿಸುವ ವಿಚಾರದಲ್ಲಿ ತಲೆ ಹಾಕ ಲಿಕ್ಕೆ ಅವರಿಗೆ ಸಮಯವೇ ಇರಲಿಲ್ಲ. ಅದು ಊರೊಳಗಿನ ಎಲ್ಲ ಜನರಿಗೂ ಕ್ರಮವಾಗಿ ತಿಳಿಯಿತು. ಚಂದ್ರಕಾಂತನು ಯಾವನೊಬ್ಬ ಅನಾಥನಾಗಿದ್ದರೆ

ಅಥವಾ ಸರ್ವಸಾಮಾನ್ಯ ಮನುಷ್ಯನಾಗಿದ್ದರೆ ಆತನ ಆ ಅಪರಾಧವನ್ನು ಯಾರೂ ಕ್ಷಮಿಸುತ್ತಿರಲಿಲ್ಲ. ಕೂಡಲೆ ಅವನನ್ನು ಬೈಲಿಗೆ ಎಳೆದು, ಅವನ ತಪ್ಪನ್ನು ಅವನ ಸೆರಗಿಗೆ ಕಟ್ಟಿ, ಅವರು ಅವನನ್ನು ಜಾತಿಯಿಂದ ಚ್ಯುತಿಗೊಳಿಸವೆ ಬಿಡುತ್ತಿರಲಿಲ್ಲ; ಆದರೆ ಚಂದ್ರಕಾಂತನು ಧನವಂತನು; ಪಾಶ್ಚಾತ್ಯ ವಿದ್ಯಾವಿಭೂಷಿತನು. ಆದ್ದರಿಂದ ಆತನ ವಿರುದ್ಧವಾಗಿ ಆತನ ಆ ಅಪರಾಧದ ಬಗ್ಗೆ ಯಾರೂ ಪ್ರಕಾಶಭಾವದಿಂದ ಪೃಚ್ಛಾಪೃಚ್ಛ ಮಾಡುವಂತಿರಲಿಲ್ಲ. ಆ ಊರಲ್ಲಿ ಚಂದ್ರಕಾಂತನನ್ನು ಹಾಗೆ ಬೈಲಿಗೆ ಹಿಡಿಯುವವನೆಂದರೆ, ಮಾರ್ತಂಡರಾಯನೊಬ್ಬನೇ ಆಗಿದ್ದನು; ಆದರೆ ಯಾವ ಕಾರಣದಿಂದಲೊ ತಿಳಿಯದು. ಅವನು ಒಮ್ಮೆ ಸಹ ಆ ಮಾತನ್ನೆತ್ತಲಿಲ್ಲ.

ಹೀಗೆ ಆ ಊರ ಗಂಡಸರಾರೂ ಚಂದ್ರಕಾಂತನ ಆ ಅನಾಚಾರದ ಬಗ್ಗೆ ಯೋಗ್ಯ ಶಾಸನದ ಮಾರ್ಗವನ್ನವಲಂಬಿಸದ್ದರಿಂದ, ಆ ಊರಲ್ಲಿಯ ವೃದ್ಧ ವಿಧವೆಯರೇ ಆ ಕರ್ತವ್ಯಕರ್ಮಕ್ಕೆ ತೊಡಗಿದರು. ಅವರು ನಿರಪರಾಧಿಯಾದ ವಲ್ಲಭರಾಯನ ಹಾಗು ಆತನ ಹೆಂಡತಿಯಾದ ಶಶಿಮುಖಿಯ ಜಾತಿಭ್ರಷ್ಟತೆಯನ್ನು ತಡೆಯುವ ಪವಿತ್ರ ಉದ್ದೇಶದಿಂದ ಅವರ ಬಳಿಗೆ ಹೋಗಿ, ಅವರಿಗೆ ತಿಳಿಸಿದರೇನಂದರೆ:—ಶಾರದೆಯು ಕಾಶಿಯೊಳಗಿನ ಯಾವಳೊಬ್ಬ ವೇಶ್ಯೆಯ ಕನ್ಯೆಯಾಗಿರುವಳೆಂಬ ಮಾತು ಇನ್ನು ನಿಸ್ಸಂದೇಹವಾಗಿದೆ. ನೀವು ಶಾರದೆಯ ಸಂಗಡ ಪಾನ-ಭೋಜನಗಳನ್ನು ಮಾಡಿದುದರಿಂದ ನಿಮ್ಮಿರ್ವರ ಜಾತಿ ಧರ್ಮಗಳೂ ನಾಶವಾಗಿ ಹೋಗಿರುತ್ತವೆ.

ಆ ನುಡಿಯನ್ನು ಕೇಳಿ ಶಶಿಮುಖಿಯು ಒಮ್ಮೆಲೆ ಬೆಚ್ಚಿಬಿದ್ದಳು! ಕೆಲ ಕಾಲದ ಮೇಲೆ ಅವಳು ತುಸ ಸಾವರಿಸಿಕೊಂಡು:—ಏನು, ಆದದ್ದಾದರೂ ಏನು? ಎಂದು ಕೇಳಲು.

ಅಲ್ಲಿಗೆ ಬಂದಿದ್ದ ಊರೊಳಗಿನ ಒಬ್ಬ ಪ್ರಮುಖ ವೃದ್ಧ ರಮಣಿಯು ಸಿಟ್ಟುಸಿರುಗರೆದು:—ತಾಯಿ, ಇನ್ನೇನು ಆಗುವದುಳಿದಿದೆ? ಏನು ಆಗಬೇಕಾಗಿದ್ದಿತೋ, ಅದೇ ಆಗಿರುತ್ತದೆ; ಸರ್ವನಾಶವೂ ಆಗಿರುತ್ತದೆ! ಎಂದೆಂದು, ಅವಳು ಶಾರದೆಯ ಸಂಬಂಧವಾಗಿ ಕಾಶಿಯ ಹರಭಟ್ಟನಿಂದ ಮಾರ್ತಂಡರಾಯನಿಗೆ ಬಂದ ಕಾಗದದ ಸಂಗತಿಗೆ ಚೆನ್ನಾಗಿ ಉಪ್ಪು ಕಾರ ಹಚ್ಚಿ ಒಳ್ಳೇ ಮನರಂಜನೆಯಾಗುವಂತೆ ಶಶಿಮುಖಿಗೆ ವಿವರಿಸಿ ಹೇಳಿದಳು. ಆ ಪ್ರಮುಖ ವೃದ್ಧಳು ಶಶಿಮುಖಿಗೆ ಹೇಳುವಾಗ ಏನಾದರೂ ಅಲ್ಪ ಸ್ವಲ್ಪ ಸ್ಖಾಲಿತ್ಯವುಂಟಾದರೆ, ಅವಳೊಡನೆ ಶಶಿಮುಖಿಯ ಮನೆಗೆ ಅದೇ ಕೆಲಸಕ್ಕೆಂದು ಬೇಕಂತ ಬಂದಿದ್ದ ಮಿಕ್ಕ ನಾಲ್ಕೈದು ಜನ ಹೆಂಗಸರು ಅದನ್ನು ತಮ್ಮ ಕಾವ್ಯಮಯ

ಭಾಷೆಯಿಂದ ರಂಜನಗೊಳಿಸುತ್ತಿದ್ದರು. ಅವರ ಆ ವಿವರಣವನ್ನು ಕೇಳಿ ನಿಜವಾಗಿಯೂ ತಮ್ಮ ಸರ್ವ ನಾಶವಾಯಿತೆಂದು ಶಶಿಮುಖಿಯು ತಿಳಕೊಂಡಳು. ಬಳಿಕ ಅವಳು ಬಹಳ ಹೊತ್ತಿನ ವರೆಗೆ ಅವರೆದುರಿಗೆ ಕುಳ್ಳಿರಲಾರದೆ, ಚಟ್ಟನೆ ಎದ್ದು ತನ್ನ ಸ್ವಂತದ ಕೋಣೆಯನ್ನು ಸೇರಿ, ಬಾಗಿಲವನ್ನಿಕ್ಕಿಕೊಂಡು ಕುಳಿತು, ಆ ಬಗ್ಗೆ ಆಲೋಚಿಸತೊಡಗಿದಳು. ಊರೊಳಗಿನ ಯಾವ ಪ್ರಮುಖ ಹೆಂಗಸರು ಅವಳಿಗೆ ಆ ಸಂಗತಿಯನ್ನು ತಿಳಿಸಿ, ತಮ್ಮ ಕರ್ತವ್ಯಕರ್ಮ ಮಾಡಲಿಕ್ಕೆ ಬಂದಿದ್ದರೋ, ಅವರು ಇಷ್ಟರಿಂದ ತಕ್ಕ ಪರಿಣಾಮವಾಗುವದೋ-ಇಲ್ಲವೋ ಎಂಬದನ್ನರಿಯದೆ, ಬಂದ ದಾರಿಗೆ ಸುಂಕವಿಲ್ಲೆಂಬಂತೆ ಒಬ್ಬೊಬ್ಬರೇ ಅಲ್ಲಿಂದ ಕಾಲ್ದೆಗೆದರು. ಶಶಿಮುಖಿಯು ಒಳ್ಳೇ ಯೋಚನೆಯಿಂದ ತನ್ನ ಕೋಣೆಯನ್ನು ಪ್ರವೇಶಿಸಿದಳೇನೋ ನಿಜ; ಆದರೆ ಅಲ್ಲಿ ಅವಳು ಹಾಗೆ ಕ್ಷಣಕಾಲವೇ ಕುಳಿತ ಕೂಡಲೆ ಆಕೆಯ ಮುಂದಿನ ಆ ಚಿಂತಾಸಾಗರವು ಬೈಲಾಗಿ, ಆ ಸ್ಥಳವನ್ನು ಹೃದಯಾನಂದ ಪೂರ್ಣ ತೆರೆಂಗಗಳು ಆಕ್ರಮಿಸಿ ಬಿಟ್ಟವು. "ಶಾರದೆಯ ಮೇಲೆ ಬಂದಿರುವ ಈ ದುರಪವಾದದ ಪ್ರಸಂಗವು ಕಡೆತನಕ ತಾಳಿದರೆ ಮಾತ್ರ ತನ್ನ ಸುದೈವಕ್ಕೆ ಎಣೆಯೇ ಇಲ್ಲವೆನ್ನಬೇಕು. ಹಿಂದಕ್ಕೆ ಚಂದ್ರಕಾಂತನು ಹೊರಟು ಹೋದಾಗಲೇ ಆತನ ಆಸ್ತಿ-ಪಾಸ್ತಿಗಳನ್ನೆಲ್ಲ ವಶಮಾಡಿಕೊಳ್ಳಿರೆಂದು ನಾನು ನಮ್ಮವರಿಗೆ ಬಗೆಬಗೆಯಿಂದ ಹೇಳಿದ್ದೆನು; ಆದರೆ ಇವರು ತೀರ ಭೋಳೇ ಭಾವಿಕರು; ಅಲ್ಲದೆ ಆಗ ನನ್ನ ದೈವವೂ ಫಲಿಸಿರಲಿಲ್ಲ. ಈಗ ಆ ಭಗವಂತನೇ ನನ್ನ ಮೊರೆಯನ್ನು ಕೇಳಿ, ನನಗೀ ಸುಸಂಧಿಯನ್ನು ದೊರಕಿಸಿ ಕೊಟ್ಟಿರುತ್ತಾನೆ. ಇನ್ನು ನಮ್ಮ ಚಂದ್ರಕಾಂತನಲ್ಲಿ ಶಾರದೆಯ ವಿಷಯದ ಆ ಅಪವಾದವನ್ನು ಹೆಚ್ಚಾಗಿ ದೃಢೀಕರಿಸಲೆತ್ನಿಸುವೆನು. ಅಂದರೆ ಅವನು ಇವಳನ್ನು ಕೂಡಲೆ ಹೊರಗಟ್ಟುವನಲ್ಲದೆ, ತಾನೂ ವೈರಾಗ್ಯ ತಾಳಿ ಹೊರಟು ಹೋಗುವ ಸಂಭವವಿದೆ. ಹೇಗೂ ಆ ನನ್ನ ಅಣ್ಣನ ಮಗಳ ಲಗ್ನವಿನ್ನೂ ಆಗಿಲ್ಲ. ಚಂದ್ರಕಾಂತನು ಒಲ್ಲೆನೆಂದರೂ ಬಲುಮೆಯಿಂದಾದರೂ ನಾನು ಅವಳನ್ನು ಇವನಿಗೆ ಲಗ್ನ ಮಾಡಿಯೇ ತೀರುವೆನು. ಆ ಮೇಲೆಯೂ ಇವನು ದೇಶಾಂತರಕ್ಕೆ ಹೊರಟರೆ, ಹೊರಡಲಿ. ಆ ಬಗ್ಗೆ ನಾನು ಕೊಂಚವೂ ಯೋಚಿಸುವದಿಲ್ಲ. ಒಟ್ಟಿನಲ್ಲಿ ಈ ಮನೆಯ ಯಾಜಮಾನ್ಯವು ನನಗೆ ಹಕ್ಕಿನಿಂದ ಪ್ರಾಪ್ತವಾಗಬೇಕೆಂಬದೇ ಎಂದಿನಿಂದಲೂ ನನ್ನ ಇಷ್ಟ. ಅದು ಕೈಗೂಡಿದರೆ ತೀರಿತು. ಭಗವಂತನು ಈಗ ಆ ಸುಯೋಗವನ್ನು ತಂದಿರುವನಾದ್ದರಿಂದ, ನಾನಿನ್ನು ಸುಮ್ಮನೆ ಕಾಲಕ್ರಮಿಸಲಾಗದು. ಬೇಗನೆ ಉದ್ದಿಷ್ಟ ಕಾರ್ಯಕ್ಕೆ ತೊಡಗ

ಬೇಕು" ಎಂದು ನಿಶ್ಚಯಿಸಿಕೊಂಡವಳೇ, ಅವಳು ನೆಟ್ಟಗೆ ಚಂದ್ರಕಾಂತನ ಬೈಠಕಖಾನೆಗೆ ತೆರಳಿದಳು.

ಆಗ ಚಂದ್ರಕಾಂತನು ಏನನ್ನೋ ಬರೆಯುತ್ತ ಕುಳಿತಿದ್ದನು. ಆಕಸ್ಮಿಕವಾಗಿ ತನ್ನ ಬಳಿಗೆ ಬಂದ, ಅದರಲ್ಲಿಯೂ ಒಳ್ಳೇ ಚಿಂತಾಕ್ರಾಂತ ಮುಖದಿಂದ ಬಂದಿರುವ ತನ್ನ ಸೋದರತ್ತೆಯಾದ ಶಶಿಮುಖಿಯನ್ನು ಕಂಡು ಆತನು ಚಕಿತನಾದನು. ಕೂಡಲೆ ಆತನು:—ಅತ್ತೀ, ಏನಾಯಿತು? ಎಂದು ಪ್ರಶ್ನೆ ಮಾಡಿದನು.

ಶಶಿಮುಖಿಯು ಹಣೆ ಹಣೆ ಬಡಕೊಳ್ಳುತ್ತ, ಬಿಕ್ಕಿ ಬಿಕ್ಕಿ ಅಳುತ್ತ:—ತಮ್ಮಾ, ಚಂದ್ರಕಾಂತಾ; ನಾವು ಬಡವರೂ, ನಿನ್ನ ಆಶ್ರಯಕ್ಕೆ ಬಂದು ಬಿದ್ದವರೂ ಎಂದು ನಮಗೀ ತರದ ಶಿಕ್ಷೆಯನ್ನು ನೀನು ವಿಧಿಸಬಹುದೇ?

ಚಂದ್ರಕಾಂತನು ಮತ್ತಿಷ್ಟು ಚಕಿತನಾಗಿ ಹೋದನು. ಅವನಿಗೆ ಶಶಿಮುಖಿಯ ಮಾತಿನಲ್ಲಿಯ ಒಂದು ಶಬ್ದದ ಅರ್ಥವೂ ಚನ್ನಾಗಿ ಆಗಿರಲಿಲ್ಲ.

ಶಶಿಮುಖಿಯು ಮತ್ತೆ ಹೇಳುತ್ತಾಳೆ:—ತಮ್ಮಾ, ನಮ್ಮ ಅವಹೇಲನೆಯು ಬಾಕಿಯುಳಿದಿರುವದೇನು? ಒಂದು ತುತ್ತು ಕೂಳಿನ ಸಲುವಾಗಿ ನಮ್ಮ ಜಾತಿ ಹೋಯಿತು, ಕುಲ ಹೋಯಿತು, ಧರ್ಮ ಹೋಯಿತು. ನಮಗೆ ನಮ್ಮ ಸತ್ತೆಯ ಹೊಲ-ಮನೆಗಳಿಲ್ಲದ್ದರಿಂದಲೇ ನೀನು ನಮ್ಮನ್ನು ಈ ಬಗೆಯಾಗಿ ಸರ್ವನಾಶಗೊಳಿಸಲಿಕ್ಕೆ ಸಿದ್ಧನಾಗಿರುತ್ತೀ.

ಚಂದ್ರಕಾಂತನು ಕೆಲಕ್ಷಣಗಳ ವರೆಗೆ ಸುಮ್ಮನೆ ಕುಳಿತು, ಒಳ್ಳೇ ಶಾಂತ ಭಾವವನ್ನು ತಾಳಿ:—ಅತ್ತೀ, ಆಗಿರುವದಾದರೂ ಏನು? ಬಿಚ್ಚಿ ಹೇಳಬಾರದೇ?

ಶಶಿಮುಖಿಯು ಸೆರಗಿನ ತುದಿಯಿಂದ ಸುಮ್ಮಸುಮ್ಮನೆ ಕಣ್ಣುಗಳನ್ನು ತಿಕ್ಕಿಕೊಳ್ಳುತ್ತ:—ನಮ್ಮ ಹಣೇಬರೆಹದಲ್ಲಿ ಏನು ಬರೆದಿತ್ತೋ ಕಡೆಗೆ ಅದೇ ಆಯಿತು. ತಮ್ಮಾ, ಚಂದ್ರಕಾಂತಾ, ನನ್ನ ಪ್ರೇಮದ ಪುತ್ಥಳಿಯೇ, ನಿನ್ನನ್ನು ಮೋಸಗೊಳಿಸಿ, ಆ ಬೀದಿಯ ಬಸವಿಯರು ಈ ಆಟವನ್ನು ಹೂಡಿರುವರು!

"ಅತ್ತೀ, ನಿನ್ನ ಈ ಸಂದಿಗ್ಧ ಭಾಷಣದಿಂದ ನನಗೇನೂ ತಿಳಿಯದಾಗಿದೆ. ನೀನು ದಯವಿಟ್ಟು ಅದೆಲ್ಲವನ್ನೂ ಒಡೆದು ಹೇಳು, ನೋಡೋಣ."

"ಇನ್ನೇನು ಹೇಳಲಿ ನಾನು? ಈ ವಿಷಯದ ಹೆಚ್ಚಿನ ಸಂಗತಿಯನ್ನು ನೀನು ನಿನ್ನ ಕಕ್ಕ-ಮಾರ್ತಂಡರಾಯ-ನಿಂದಲೇ ತಿಳಿಯಬಲ್ಲೆ"

ಶಶಿಮುಖಿಯ ಆ ವಾಕ್ಯವನ್ನು ಕೇಳಿ, ಚಂದ್ರಕಾಂತನು ರೋಷಗೊಂಡು:—ಕಕ್ಕನನ್ನೇ ಕೇಳಿ ತಿಳಿಯಬಹುದಾಗಿದ್ದರೆ, ನೀನು ಇದುವರೆಗೆ ಇಲ್ಲಿ ಈ ಇಲ್ಲದ ಗೊಂದಲವನ್ನೇಕೆ ಎಬ್ಬಿಸಿದೆ?

ಅಪ್ಪಾ, ನಮ್ಮ ಸರ್ವನಾಶವಾಗಿರುತ್ತದಾದ್ದರಿಂದಲೇ ನಾನು ಹೀಗೆ ಮಾಡಿದೆನು; ಮತ್ತೇನೂ ಇಲ್ಲ.

ಚಂದ್ರಕಾಂತನು ತನ್ನ ಸೋದರತ್ತೆ-ಸೋದರಮಾವನಲ್ಲಿ ಒಳ್ಳೇ ಭಕ್ತಿ ವಿಶ್ವಾಸವುಳ್ಳವನು. ಅದರಿಂದ ಅವನು ಅಷ್ಟು ವಿದ್ಯಾವಿಭೂಷಿತನಾಗಿದ್ದರೂ ಅವರೆದುರಿಗೆ ಹೆಚ್ಚು ಮಾತು ಕೂಡ ಆಡುತ್ತಿರಲಿಲ್ಲ; ಆದರೆ ಈ ದಿನ ಶಶಿಮುಖಿಯ ಆ ಭಾಷಣದಿಂದ ಅವನು ಸಂತಾಪವಿದಗ್ಧನಾಗಿ:—ನನ್ನಲ್ಲಿ ನಿಮ್ಮ ಸರ್ವನಾಶವಾಗಿ ಹೋಗಿದ್ದರೆ, ನೀವು ಇನ್ನು ಇಲ್ಲಿರುವ ಕಾರಣವೇನು? ನಿಮಗೆ ಸರಿ ಕಂಡಲ್ಲಿಗೆ ನೀವು ಹೋಗಿ ಬಿಡಿರಿ. ನನ್ನೆದುರಿಗೆ ಇಲ್ಲದ ರಗಳೆಯನ್ನು ಹೇಳಬೇಡಿರಿ, ಎಂದು ಬಹು ನಿಷ್ಠೂರವಾಗಿ ನುಡಿದನು.

ಕೂಡಲೆ ಶಶಿಮುಖಿಯು ಮೊಪ್ಪನೆ ನೆಲಕ್ಕೆ ಕುಳಿತು, ಚಂದ್ರಕಾಂತನ ಮೃತ ತಾಯಿಯನ್ನು ಹೆಸರುಗೊಂಡು ಕೂಗಿ:—ತಾಯಿೊ, ನೀನು ನಮ್ಮನ್ನು ಬಲುಮೆಯಿಂದ ಕರೆತಂದೆಯೆಂತಲೇ ನಾವಿಲ್ಲಿಗೆ ಬಂದೆವು; ಹಾಗು ನಮ್ಮ ಶಕ್ತಿಮೀರಿ ದಣಿಗಿ, ಈ ನಿನ್ನ ಮಗನನ್ನು ದೊಡ್ಡವನನ್ನಾಗಿ ಮಾಡಿದೆವು; ಆದರೆ ಕಾಲವು ತಿರುಗಿತೆಂದರೆ, ಮನೆಯೊಳಗಿನ ಕಸಬರಿಗೆಯೂ ಮೈಮೇಲೆ ತಿರುಗಿ ಬೀಳುವಂತೆ, ಇಂದು ನಿನ್ನ ಈ ಕುವರನು ನಮ್ಮನ್ನು ಈ ಮನೆಯಿಂದ ಹೊರಗಟ್ಟತೊಡಗಿರುತ್ತಾನಲ್ಲ! ಎಂದಂದು ಆಕ್ರೋಶ ಮಾಡಲಾರಂಭಿಸಿದಳು.

ಶಶಿಮುಖಿಯ ಆ ಕೃತಿಯ ಅರ್ಥವನ್ನೇ ತಿಳಿಯದ ಚಂದ್ರಕಾಂತನು ವಿಸ್ಮಯಮಿಸ್ಫೂರಿತ ಭಾವದಿಂದ ಆಕೆಯ ಪಾದಗಳನ್ನು ವಂದಿಸಿ:—ಅತ್ತೀ, ಇಂದು ನೀನು ಹೀಗೇಕೆ ಮಾಡುತ್ತೀ? ನೀನು ಸ್ಪಷ್ಟವಾಗಿ ಹೇಳದಿದ್ದರೆ ನಾನು ಏನೆಂದು ತಿಳಿದುಕೊಳ್ಳಲಿ? ಯಾರಿಂದ ನಿಮ್ಮ ಸರ್ವ ನಾಶವಾಯಿತು? ಸರ್ವನಾಶವೆಂದರೇನು? ಚೆನ್ನಾಗಿ ಒಡೆದು ಹೇಳಿದ ಹೊರತು, ನನಗೇನೂ ತಿಳಿಯಲಾರದು.

ಶಶಿಮುಖಿಯು ಕಣ್ಣು ಒರೆಸಿಕೊಳ್ಳುತ್ತ:—ತಮ್ಮಾ, ಚಂದ್ರಕಾಂತಾ, ನಿನಗೆ ಆ ಬಗ್ಗೆ ಏನೂ ಗೊತ್ತಿಲ್ಲವೆ?

"ಇಲ್ಲ; ಬೇಗನೆ ಸ್ಪಷ್ಟವಾಗಿ ತಿಳಿಸು."

"ನಿಮ್ಮ ಕಕ್ಕನಿಗೆ ಕಾಶಿಯೊಳಗಿನ ನಿಮ್ಮ ಪುರೋಹಿತನು ಕಾಗದ ಬರೆದಿರುತ್ತಾನೆ."

"ಏನೆಂದು ಬರೆದಿದ್ದಾನೆ?"

ಆಗ ಶಶಿಮುಖಿಯು ಖೇಕರಿಸಿ ಗಂಟಲು ಸರಿಮಾಡಿಕೊಂಡು, ಗೋಣು ಅಲ್ಲಾಡಿಸುತ್ತ:—ತಮ್ಮಾ, ಕಾಶಿಯೊಳಗಿನ ಕೆಲ ಜನ ವೇಶ್ಯೆಯರು ನಿನ್ನನ್ನು ಮೋಸಪಡಿಸಿ, ನೀನು ಒಬ್ಬ ವೇಶ್ಯೆಯೊಡನೆ ಲಗ್ನವಾಗುವಂತೆ ಮಾಡಿದರಂತೆ!

ಚಂದ್ರಕಾಂತನು ಆ ನುಡಿಯನ್ನು ಕೇಳಿ ಚಕಿತ ನೇತ್ರಗಳಿಂದ ಶಶಿಮುಖಿಯ ಕಡೆಗೆ ನೋಡುತ್ತ:—ಯಾರು ಯಾರನ್ನು ಮೋಸಪಡಿಸಿದರಂತೆ?

"ತಮ್ಮಾ, ಅಲ್ಲಿಯ ವೇಶ್ಯೆಯರು ನಿನ್ನನ್ನು...." ಎಂದಂದು ಹಣೆ ಹಣೆ ಬಡಿಕೊಳ್ಳತೊಡಗಿದಳು.

ಚಂದ್ರಕಾಂತನು ಅತ್ತೆಯ ಬಳಿಗೆ ಸರಿದು ಕುಳಿತು:—ವೇಶ್ಯೆಯನ್ನು ವರಿಸಿದವರಾರು? ನಾನೇಯೊ?

"ಅಹುದು; ನೀನೇ."

"ಅಂದರೆ, ಲಗ್ನಕ್ಕೆ ಮೊದಲೇ ಶಾರವೆಯು ವೇಶ್ಯಾವೃತ್ತಿಯನ್ನವಲಂಬಿಸಿದ್ದಳೆಂತಲ್ಲವೆ? ಅತ್ತೀ, ನಾನು ಅವಳನ್ನು ಲಗ್ನವಾಗಿ ಈ ಮನೆಗೆ ಕರೆತಂದಾಗ ಅವಳು ಕೇವಲ ಹತ್ತೇ ವರ್ಷದ ಕುವರಿಯಾಗಿದ್ದಳೆಂಬದು ನಿನಗೆ ಗೊತ್ತಿಲ್ಲವೆ?"

"ಚಂದ್ರಕಾಂತಾ, ಆಗ ಆಕೆಗೆ ವಯಸ್ಸೇನಿತ್ತೆಂಬದರ ನಿಷ್ಕರ್ಷವನ್ನು ನಾನಾದರೂ ಹೇಗೆ ಹೇಳಲಿ? ಶಾರವೆಯ ತಾಯಿಯಂತೂ ತನ್ನ ಕಸಬಿನಿಂದ ಕಾಶಿಯಲ್ಲೆಲ್ಲ ಪ್ರಸಿದ್ಧಿ ಪಡೆದಿರುತ್ತಾಳೆ."

"ಹಾಗಾದರೆ ಶಾರವೆಯ ತಾಯಿಯು ಮಾತ್ರ ವೇಶ್ಯೆಯಾಗಿರುವಳೇ ವಿನಃ, ಸ್ವತಃ ಶಾರವೆಯು ವೇಶ್ಯಾವೃತ್ತಿಯಲ್ಲಿರಲಿಲ್ಲವಷ್ಟೇ?"

ಇದು ವರೆಗಿನ ತನ್ನ ಖಟಾಟೋಪವೆಲ್ಲ ಚಂದ್ರಕಾಂತನೆಮರಿಗೆ ಇನ್ನು ನಡೆಯಲಾರದೆಂದು ಊಹಿಸಿ, ಶಶಿಮುಖಿಯು ಮೆಲ್ಲನೆ:—ಆ ತಾಯಿಯ ಮಗಳೇ ಇವಳು! ಆ ತಾಯಿಯ ಮಗಳೇ ಇವಳು! ಎಂದಂದು ಸುಮ್ಮನಾದಳು.

ಆಗ ಚಂದ್ರಕಾಂತನು ಒಳ್ಳೇ ರಭಸದಿಂದ ಅನ್ನುತ್ತಾನೆ:—ಅತ್ತೀ, ಯಾರಿಗೆ ಏನು ಅನ್ನುತ್ತೀಯೆಂಬದರ ಅರಿವಾದರೂ ನಿನಗಿದೆಯೆ? ನಿನಗೆ ಇಂದು ಹುಚ್ಚು-ಗಿಚ್ಚು ಹಿಡಿದಿಲ್ಲವಷ್ಟೆ?

ಶಶಿಮುಖಿಯು ಮತ್ತೆ ಅಳುಮೋರೆಯಿಂದ: —ತಮ್ಮಾ, ಇಂದು ನನಗೆ ಹುಚ್ಚೇಹಿಡಿಯಬಹುದಾಗಿದೆ. ಅದು ಏನೇ ಇರಲಿ; ಇಂದು ನಮ್ಮಿಬ್ಬರಿಗೂ ಜಾತಿ ಧರ್ಮ ಭ್ರಷ್ಟತೆಯ ಪ್ರಾಯಶ್ಚಿತ್ತ ತಕ್ಕೊಳ್ಳುವ ವ್ಯವಸ್ಥೆ ಮಾಡಿಕೊಡು. ಅಷ್ಟು ಕಾರ್ಯವನ್ನು ನೆರವೇರಿಸಿಕೊಟ್ಟೆಯೆಂದರೆ, ಬಳಿಕ ನಾವು ಇಲ್ಲಿ-ಈ ಮನೆಯಲ್ಲಿ-ಒಂದು ಕ್ಷಣ ಕೂಡ ಇರಲಾರೆವು. ನಮಗೆ ತೋರಿದತ್ತ ನಾವು ಹೊರಟು ಹೋಗಿ, ಭಿಕ್ಷೆಯಿಂದಲಾದರೂ ಉಪಜೀವಿಸುತ್ತೇವೆ: ಆದರೆ ಇನ್ನು ಇಲ್ಲಿ ಹೀಗೆ ಧರ್ಮ-ಜಾತಿ ಬಾಹಿರರಾಗಿ ಕೊಳೆಯಲಾರೆವು.

ಅದನ್ನು ಕೇಳಿ ಚಂದ್ರಕಾಂತನ ಸಿಟ್ಟು ಶಿಖರಕ್ಕೆ ಮುಟ್ಟಲು, ಅವನು:- ಹಾಗೆಯೇ ಮಾಡಿರಿ! ಎಂದು ಕೂಗಿಕೊಂಡನು.

"ಹಾಗಾದರೆ ನಾವಿನ್ನು ಹೊರಡೋಣವೆ?" ಎಂದು ಶಶಿಮುಖಿಯು ಮತ್ತೆ ಕೇಳಲು, ಚಂದ್ರಕಾಂತನು ಬೇರೆ ಕಡೆಗೆ ಮೋರೆ ತಿರುವಿ:— "ಹೊರಡಿರಿ" ಎಂದಂದನು.

ಆಗ ಶಶಿಮುಖಿಯು ಮತ್ತೆ ಗಟ್ಟಿಗಟ್ಟಿಯಾಗಿ ಹಣೆಯನ್ನು ಬಡೆಕೊಂಡು:—ಅಯ್ಯೋ ದೈವವೇ! ಕಡೆಗೆ ನನ್ನನ್ನು ಈ ಅವಸ್ಥೆಗೆ ಮುಟ್ಟಿಸಿವೆಯಾ? ಎಂದು ಪ್ರಲಾಪಿಸಹತ್ತಿದಳು.

ಕೆಲಹೊತ್ತಿನ ಮೇಲೆ ಚಂದ್ರಕಾಂತನು ತುಸ ಶಾಂತ ಭಾವವನ್ನು ತಾಳಿ:—ಅತ್ತೀ, ಇನ್ನಾದರೂ ನಡೆದ ಸಂಗತಿಯನ್ನು ಪರಿಷ್ಕಾರವಾಗಿ ಹೇಳಬಾರದೇ?

"ತಮ್ಮಾ, ಹೇಳತಕ್ಕದ್ದೆಲ್ಲವನ್ನೂ ಈ ಮೊದಲೇ ನಿನಗೆ ಹೇಳಿಬಿಟ್ಟಿದ್ದೇನೆ."

"ನಿನ್ನಿಂದ ಯಾವದೂ ಸ್ಪಷ್ಟವಾಗಿ ತಿಳಿದಿಲ್ಲ. ಆ ಕಾಗದವೆಲ್ಲಿ? ನೋಡೋಣ!"

"ಅದು ನಿನ್ನ ಕಕ್ಕನ ಬಳಿಯಲ್ಲಿದೆ."

"ಅದರಲ್ಲಿ ಬರೆದಿರುವುದಾದರೂ ಏನು?"

"ಅದನ್ನೆಲ್ಲ ಈ ಮೊದಲೇ ಹೇಳಿದ್ದೇನೆ."

ಚಂದ್ರಕಾಂತನು ಕುಳಿತ ಸ್ಥಳದಿಂದೆದ್ದು ಪಡಸಾಲೆಯ ಬಳಿಯ ಒಂದು ಚಿಕ್ಕ ಕಟ್ಟೆಯ ಮೇಲೆ ಹೋಗಿ ಕುಳಿತನು. ಅತ್ಯಂತ ಅಪಮಾನದಿಂದಲೂ ಸಂತಾಪದಿಂದಲೂ ಅಂಗಾಲಿನಿಂದ ನಡುನೆತ್ತಿಯ ವರೆಗೆ ಆತನು ಉರಿಯಹತ್ತಿದನು. ಆಗ ಆತನ ಬಾಯಿಂದ ಬಹು ತಿರಸ್ಕಾರ ಸೂಚಕ ದನಿಯಿಂದ "ಛೀ, ನನ್ನ ಬಾಳೇ!" ಎಂಬ ಶಬ್ದಗಳು ಮೆಲ್ಲನೆ ಹೊರಬಿದ್ದು ಹೋದವು!

ಶಶಿಮುಖಿಯು ಕುಳಿತ ಸ್ಥಳದಿಂದಲೇ ಆತನ ಮುಖವನ್ನು ದಿಟ್ಟಿಸಿ ನೋಡುತ್ತಿದ್ದಳು. ಆಗಿನ ಆತನ ಆ ಕೆಂಪಡರಿದ ಮುಖಭಾವವನ್ನು ಕಂಡು ಅವಳ ದೇಹವೆಲ್ಲ ಭಯಕಂಪಿತವಾಯಿತು. ಆತನ ಅಂಥ ಉಗ್ರ ಮುಖಭಾವವನ್ನು ಅವಳು ಎಂದೂ ಕಂಡಿರಲಿಲ್ಲ. ಚಂದ್ರಕಾಂತನು ಮೆಲ್ಲನೆ ನುಡಿದ ಶಬ್ದಗಳು ಅವಳಿಗೆ ಕೇಳಿಸಲಿಲ್ಲ. ಅದರಿಂದ ಅವಳು ಪಿಟ್ಟೆಂದುಸುರದೆ, ಅಲ್ಲಿಂದ ಹೊರಟು ಹೋದಳು.

---

## ೭ನೇ ತರಂಗ:—ಆದದ್ದು ಸರಿಯಾಗಲಿಲ್ಲ.



ಚಂದ್ರಕಾಂತನು ಮಾರ್ತಂಡರಾಯನ ಬಳಿಗೆ ಹೋಗಿ:—ಕಕ್ಕಾ, ಕಾಶಿಯಿಂದ ಬಂದ ಕಾಗದವೆಲ್ಲಿದೆ, ತೋರಿಸು ನೋಡೋಣ? ಎಂದು ಕೇಳಿದನು.

ಮಾರ್ತಂಡರಾಯನು ಬಾಯಿಂದ ಒಂದು ಶಬ್ದ ಕೂಡ ಉಚ್ಚರಿಸದೆ, ತನ್ನ ಪೆಟ್ಟಿಗೆಯನ್ನು ತೆರೆದು, ಅದರೊಳಗಿನ ಒಂದು ಕಾಗದವನ್ನು ತೆಗೆದು ಆತನ ಕೈಗಿತ್ತನು. ಚಂದ್ರಕಾಂತನು ಅದನ್ನು ಎರಡೆರಡು ಸಾರೆ ಓದಿ ನೋಡಿದನು. ಬಳಿಕ ಅವನು ತನ್ನ ಕಕ್ಕನನ್ನು ಕುರಿತು:—ಕಕ್ಕಾ, ಈ ಕಾಗದದ ಸಂಗತಿಗೆ ಆಧಾರವೇನು?

ಸ್ವತಃ ಆ ವೈಶ್ಯರ ರಾಮಣ್ಣನೇ ಇಲ್ಲಿಗೆ ಬಂದಿರುತ್ತಾನೆ.

ಆತನ ಮಾತನ್ನಾದರೂ ಹೇಗೆ ನಂಬಬೇಕು?

ನಾನು ಅದನ್ನು ಹೇಗೆ ಹೇಳಲಿ? ನಿನಗೆ ಹೇಗೆ ಸರಿದೋರುವದೋ, ಹಾಗೆ ಮಾಡು.

ಆ ವೈಶ್ಯನು ಇಲ್ಲಿಗೇಕೆ ಬಂದಿರುತ್ತಾನೆ? ಈ ಸಂಗತಿಯನ್ನು ಸಿದ್ಧಗೊಳಿಸುವದರಿಂದ ಅವನಿಗೆ ಪ್ರಯೋಜನವೇನು?

ಆತನ ಲಾಭಾಲಾಭಗಳ ಸಂಗತಿಯಂತೂ ಈ ಕಾಗದದಲ್ಲಿಯೇ ವಿಮರ್ಶಿಸಲ್ಪಟ್ಟಿವೆ. ಅದರಿಂದ ಅವನಿಗೆ ಎರಡುಸಾವಿರ ರೂಪಾಯಿಗಳ ಲಾಭವಿದೆ.

ಚಂದ್ರಕಾಂತನು ಮಾರ್ತಂಡರಾಯನ ಮುಖದ ಕಡೆಗೆ ಟಕಮಕವೆಂದು ನೋಡುತ್ತ ಸಹಜವಾಗಿ ಅನ್ನುತ್ತಾನೆ:—ಈ ಸಂಗತಿಯನ್ನು ಪ್ರಕಾಶಪಡಿಸಲಾರೆನೆಂಬ ಅಂಜಿಕೆದೋರಿ, ಅವನು ಇಷ್ಟು ದುಡ್ಡನ್ನೆಬ್ಬಿಸುವ ಜಾಲವನ್ನೊಡ್ಡಿರುವನೆಂಬಂತೆ ತೋರುತ್ತಿದೆ. ತಾವು ಒಮ್ಮೆಲೆ ಆತನ ಬಲೆಗೆ ಬೀಳದಿದ್ದದ್ದು ನನ್ನ ಮೇಲೆ ದೊಡ್ಡ ಉಪಕಾರ ಮಾಡಿದಂತಾಗಿರುತ್ತದೆ. ಯಾಕಂದರೆ, ಅದರಿಂದ ನೀವು ಇಂದು ನನ್ನ ಎರಡು ಸಾವಿರ ರೂಪಾಯಿಗಳನ್ನು ನನಗೆ ಉಳಿಸಿಕೊಟ್ಟಂತಾಗಿರುತ್ತದೆ.

ಚಂದ್ರಕಾಂತನ ಆ ನುಡಿಯನ್ನು ಕೇಳಿ, ಮಾರ್ತಂಡರಾಯನು ನಾಚಿಕೆಯಿಂದ ತಲೆತಗ್ಗಿಸಿದನು. ಈ ಸಂಗತಿಯನ್ನು ನಾನು ಪ್ರಕಾಶಪಡಿಸಿಲ್ಲವೆಂದು ಹೇಳುವ ಇಚ್ಛೆಯು ಆತನಿಗುಂಟಾಯಿತು; ಆದರೆ ಅಷ್ಟರಲ್ಲಿ ತನ್ನ ಮುಖಾಂತರವೇ ಆ ಸಂಗತಿಯು ಪ್ರಕಟಗೊಂಡಿರುವದೆಂಬದು ಆತನ ಸ್ಮರ

ಣಕ್ಕೆ ಬಂದಿತು. ತಾನು ತನ್ನ ಹೆಂಡತಿಯ ಎದುರಿಗೆ ಆ ಮಾತನ್ನೆತ್ತಿದಿದ್ದರೆ, ಅದು ಜನರಿಗೆ ತಿಳಿಯುವ ಮಾರ್ಗವೆಲ್ಲಿತ್ತು ? ಇದರಿಂದ ಆತನು ಏನು ಮಾತನಾಡಬೇಕೆಂಬದನ್ನು ತೋಚದೆ, ಸುಮ್ಮನೆ ಅಧೋವದನನಾಗಿ ಕುಳಿತುಬಿಟ್ಟನು !

ಚಂದ್ರಕಾಂತನು ಮತ್ತೆ ಅನ್ನುತ್ತಾನೆ:— ಈ ಊರು ನಮ್ಮ ಇನಾಮು ಗ್ರಾಮು. ಹೀಗಿದ್ದು ಒಬ್ಬ ದೀನನೂ, ವಿಷಯಲಂಪಟನೂ ಆದ ಭಿಕ್ಷುಕನು ಇಲ್ಲಿಗೆ-ನಮ್ಮನ್ನು ಅವಮಾನಗೊಳಿಸುವದಕ್ಕೆಂದು ನಮ್ಮ ಗ್ರಾಮಕ್ಕೆ, ಅದರಲ್ಲೂ ನಮ್ಮ ಮನೆಗೆ-ಬರುವ ಸಾಹಸವನ್ನು ಹೇಗೆ ಮಾಡಿದನೆಂಬದನ್ನು ನಾನು ನಿಮಗೆ ಕೇಳಲಿಚ್ಛಿಸುವದಿಲ್ಲ; ಆದರೆ ಕಕ್ಕಾ, ಈಗ ನಿಮಗೆ ಕೇಳುವದಿಷ್ಟೇ, ನಾನು ಒಮ್ಮೆಲೆ ಸತ್ತರೆ ನಿಮಗೆ ಸಮಾಧಾನವೆನಿಸುವದಲ್ಲವೆ?—

ಮಾರ್ತಂಡರಾಯನು ನಾಲಿಗೆಯನ್ನು ಕಚ್ಚಿಕೊಳ್ಳುತ್ತ:—ಚಂದ್ರಕಾಂತಾ. ಇಂಥ ಅಭದ್ರ ಶಬ್ದಗಳನ್ನು ಬಾಯಿಂದ ಕೂಡ ಉಚ್ಚರಿಸಬಾರದು.

“ಮತ್ತೆ ನೀವು ಇಂಥ ಉಪನ್ಯಾಸಕ್ಕೆ ಮನಸ್ಸು ಮಾಡುವ ಕಾರಣವಿಲ್ಲ. ನೀವು ನನಗೆ ಪರಮ ಪೂಜ್ಯರು. ನನ್ನಿಂದೇನಾದರೂ ಅಪರಾಧನಾಗಿದ್ದರೆ ಕ್ಷಮಿಸಿರಿ. ನನ್ನ ಆಸ್ತಿ-ಪಾಸ್ತಿಗಳನ್ನೆಲ್ಲ ನೀವೇ ತೆಗೆದುಕೊಳ್ಳಿರಿ. ನನಗೆ ಒಂದಿಷ್ಟೂ ಉಳಿಸಬೇಡಿರಿ. ಮಾತ್ರ ನಿಮ್ಮ ಪ್ರಸನ್ನತೆಯನ್ನಷ್ಟು ನನ್ನಲ್ಲಿರಿಸಿರಿ. ನಾನು ಎಲ್ಲಿಯಾದರೂ ಸ್ವಸ್ಥವಾಗಿರುತ್ತೇನೆ. ನನಗೆ ತಿಂಗತಿಂಗಳಿಗೆ ಕೆಲ ಮಾಸಾಶನವನ್ನು ಕೊಟ್ಟರೆ ತೀರಿತು. ದೇವರ ಆಣೆ ಮಾಡಿ ಹೇಳುತ್ತೇನೆ, ಕಕ್ಕಾ, ಇದಕ್ಕೂ ಹೆಚ್ಚಿಗೆ ನಾನೇನೂ ಬಯಸುವದಿಲ್ಲ; ಆದರೆ ಈ ಬಗೆಯಾಗಿ ನನ್ನ ಸರ್ವನಾಶವನ್ನು ಮಾತ್ರ ಖಂಡಿತವಾಗಿಯೂ ಮಾಡಬೇಡಿರಿ.” ಹೀಗೆಂದು ನುಡಿಯುವಾಗ ಚಂದ್ರಕಾಂತನ ಕಂಠವು ರುದ್ಧವಾಗಹತ್ತಿತು. ಆತನು ತನ್ನ ತುಟಿಗಳನ್ನು ಹಲ್ಲುಗಳಿಂದ ಒತ್ತಿ ಹಿಡಿದು, ತನ್ನ ಅಳುವನ್ನು ತಡೆಯಲಿಕ್ಕೆ ಪ್ರಯತ್ನಿಸತೊಡಗಿದನು.

ಮಾರ್ತಂಡರಾಯನು ಕುಳಿತ ಸ್ಥಳದಿಂದೆದ್ದು ಬಂದು ಚಂದ್ರಕಾಂತನ ಎರಡೂ ಕೈಗಳನ್ನು ಒತ್ತಿ ಹಿಡಿದು, ಭೋರೆಂದು ಅಳಹತ್ತಿದನು. ಕೆಲಕ್ಷಣಗಳ ನಂತರ ಆತನು:—ತಮ್ಮಾ, ಚಂದ್ರಕಾಂತಾ, ಪೂಜ್ಯನಾದ ಅಣ್ಣನವರಿಗೆ ನೀನೊಬ್ಬನೇ ವಂಶಧರನು. ನಾನು ನಿನ್ನಲ್ಲಿ ಕ್ಷಮೆ ಬೇಡುತ್ತೇನೆ. ನೀನು ನನ್ನಲ್ಲಿ ತಿರಸ್ಕಾರಪಟ್ಟು, ಈ ತರದ ಕೃತಿಯನ್ನು ಮಾಡಬೇಡ.

ಚಂದ್ರಕಾಂತನು ಮೋರೆ ತಿರುವಿ, ತನ್ನ ಕಣ್ಣೊಳಗಿನ ಅಶ್ರುಗಳನ್ನು ಒರೆಸಿಕೊಂಡು:—ಕಕ್ಕಾ, ನಾನು ನಿಮ್ಮನ್ನು ತಿರಸ್ಕರಿಸುವದಿಲ್ಲ. ಈ

ಬಗೆಯ ಅವಹೇಲನದ ನಂತರ ದೇಶತ್ಯಾಗದ ಹೊರತು ನನಗೆ ಬೇರೆ ಮಾರ್ಗವೇ ಉಳಿದಿರುವದಿಲ್ಲ. ಆದ್ದರಿಂದಲೇ ನಾನು ನನ್ನ ಇಂಗಿತವನ್ನು ನಿಮಗೆ ತಿಳಿಸಿಬಿಟ್ಟಿರುತ್ತೇನೆ.

ವಿಸ್ಮಯಚಕಿತ ದನಿಯಿಂದ ಮಾರ್ತಂಡರಾಯನು:—"ಚಂದ್ರಕಾಂತಾ, ನೀನು ದೇಶತ್ಯಾಗ ಮಾಡುವದೇಕೆ? ಗೊತ್ತಿಲ್ಲದೆ ಆದ ಲಗ್ನದ ಬಗ್ಗೆ ಅಷ್ಟೊಂದು ನಾಚಿಕೆಪಡುವ ಕಾರಣವಿಲ್ಲ. ಸಾಧಾರಣವಾದ ಪ್ರಾಯಶ್ಚಿತ್ತ ತಕ್ಕೊಂಡು ಬಿಟ್ಟರೆ ಬಗೆಹರಿಯುವದು."

ಚಂದ್ರಕಾಂತನು ಆ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಮೌನದಿಂದ ವಿಚಾರಮಗ್ನನಾದನು. ಅದರಿಂದ ತನ್ನ ಸೂಚನೆಯು ಸಮ್ಮತವಾಯಿತೆಂದು ಭಾವಿಸಿ, ಉತ್ಸಾಹಿತ ದನಿಯಿಂದ ಮಾರ್ತಂಡರಾಯನು ಪುನಃ:—ಇದಕ್ಕೆ ಉಪಾಯಗಳು ಅನೇಕವಿರುತ್ತವೆ. ಶಾರದೆಯನ್ನು ಪರಿತ್ಯಜಿಸಿ, ಗೌಪ್ಯರೀತಿಯಿಂದ ಪ್ರಾಯಶ್ಚಿತ್ತ ತಕ್ಕೋ. ಬಳಿಕ ಬೇರೆ ಲಗ್ನವಾಗಿ ಸಂಸಾರಿಯಾಗು; ಅಂದರೆ ಯಾವ ಬಗೆಯಿಂದಲೂ ಹೆಸರಿಡಲಿಕ್ಕೆ ಮಾರ್ಗವಿಲ್ಲದಂತಾಗುತ್ತದೆ.

ಅದನ್ನು ಕೇಳಿ ಚಂದ್ರಕಾಂತನ ಶರೀರವು ಥರಗುಟ್ಟಿ ನಡುಗಲಾರಂಭಿಸಿತು.

ಸಂಸಾರದ ಬಗ್ಗೆ ಸಂಪೂರ್ಣ ಅನುಭವಿಕನಾದ ಮಾರ್ತಂಡರಾಯನು ತೆರೆದ ಕಣ್ಣುಗಳಿಂದ ಚಂದ್ರಕಾಂತನ ಮುಖದ ಕಡೆಗೆ ಎವೆಯಿಕ್ಕವೆ ನೋಡಹತ್ತಿದನು.

ಆಗ ಚಂದ್ರಕಾಂತನು:—ಕಕ್ಕಾ, ಶಾರದೆಯನ್ನು ಯಾವ ಬಗೆಯಿಂದಲೂ ತ್ಯಜಿಸಲಿಕ್ಕೆ ಸಾಧ್ಯವಿರುವದಿಲ್ಲ.

"ಚಂದ್ರಕಾಂತಾ, ಸಾಧ್ಯವಿರುತ್ತದೆ. ಇಂದು ಇನ್ನು ಈ ಬಗ್ಗೆ ಹೆಚ್ಚು ಆಲೋಚಿಸಬೇಡ. ಇಂದು ಸಂಪೂರ್ಣ ವಿಶ್ರಾಂತಿಯನ್ನು ಹೊಂದು. ನಾಳೆ ಈ ಬಗ್ಗೆ ಪುನಃ ಯೋಚಿಸಿ ನೋಡು; ಅಂದರೆ ನಾನು ನಿನಗೆ ಹೇಳುವ ಮಾತು ಶಕ್ಯವೆಂದು ಕಂಡು ಬರದೆ ಇರಲಾರದು. ಶಾರದೆಯನ್ನು ಮನೆಯಲ್ಲಿಟ್ಟುಕೊಳ್ಳುವದು ತಕ್ಕದ್ದಲ್ಲೆಂಬದು ನಿನ್ನದು ನಿನಗೇ ಸಮ್ಮತವಾಗುವದು."

"ಯಾವ ಪ್ರಮಾಣವೂ ಇಲ್ಲದೆ, ಅವಳನ್ನು ಹಾಗೆ ಒಮ್ಮೆಲೆ ಪರಿತ್ಯಜಿಸಲಿಕ್ಕೆ ನನ್ನ ಮನಸ್ಸು ಒಪ್ಪದು."

ಮಾರ್ತಂಡರಾಯನು ಕೆಲ ಕ್ಷಣಗಳ ವರೆಗೆ ಆಲೋಚಿಸಿ:—ನಿನ್ನ ಈ ಮುಂದಿನ ಬೇತಿಗೆ ಯಾವ ಹೆಚ್ಚಿನ ಪ್ರಮಾಣಗಳ ಅವಶ್ಯಕತೆ ಬೀಳಲಿ

ಕ್ಕಿಲ್ಲವೋ, ಅದೇ ಮಾರ್ಗವನ್ನು ನೀನು ಅವಲಂಬಿಸು; ಅಂದರೆ ಕೆಲ ದಿನ ಗಳಲ್ಲಿಯೇ ಅವಳನ್ನು ತ್ಯಜಿಸುವದೇ ವಿಹಿತವೆಂಬದು ನಿನಗಾದರೂ ಅನಿಸದೆ ಇರಲಿಕ್ಕಿಲ್ಲ. ಆಕೆಯನ್ನು ತ್ಯಜಿಸಿ ಪ್ರಾಯಶ್ಚಿತ್ತ ತಕ್ಕೊಂಡೆಯೆಂದರೆ, ಈ ಗೊಂದಲವೆಲ್ಲ ಅಡಗಿ ತಣ್ಣಗಾಗುವದು.

"ಈ ಗೊಂದಲವನ್ನು ಅಡಗಿಸುವವರಾರು?"

"ನಾನೇ ಅದನ್ನು ಅಡಗಿಸುತ್ತೇನೆ"

"ಆದರೆ ಆ ಬಗ್ಗೆ ಒಂದಿಷ್ಟು ಪೂರ್ವಾಪರ ವಿಚಾರ ಮಾಡಬೇಡವೆ?"

"ವಿಚಾರ ಮಾಡುವ ಇಚ್ಛೆಯೇ ಇದ್ದರೆ, ಹಿಂದಿನಿಂದ ಆ ಬಗ್ಗೆ ವಿಚಾರ ಮಾಡೋಣವಂತೆ; ಆದರೆ ಆ ಸಂಗತಿಯು ಸುಳ್ಳೆಂಬದನ್ನು ಮಾತ್ರ ನಾನು ನಿನಗೆ ನಿಶ್ಚಯಪೂರ್ವಕವಾಗಿ ತಿಳಿಸುತ್ತೇನೆ"

ಚಂದ್ರಕಾಂತನು ತನ್ನ ಮನೆಗೆ ಹೊರಟು ಹೋದನು. ತನ್ನ ಕೋಣೆ ಯನ್ನು ಸೇರಿ ಬಾಗಿಲವನ್ನಿಕ್ಕಿಕೊಂಡು, ಪಲ್ಲಂಗದ ಮೇಲೆ ಅಡ್ಡಾಗಿ ವಿಚಾರ ಗ್ರಸ್ತನಾದನು. ಆತನು ನಿದ್ದೆ ಹತ್ತಿದವರಂತೆ ಬಿದ್ದುಕೊಂಡು, ಮಾರ್ತಂಡ ರಾಯನು ಅಂದು "ಈ ಪ್ರಸಂಗದಲ್ಲಿ ಶಾರದೆಯನ್ನು ತ್ಯಜಿಸುವದೇ ಪರಮೋ ಪಾಯವು" ಎಂದಿದ್ದ ಸಂಗತಿಯನ್ನೇ ಪುನಃ ಪುನಃ ಆಲೋಚಿಸತೊಡಗಿದನು. "ಶಾರದೆಯನ್ನು ತ್ಯಜಿಸಬೇಕು; ಯಾಕಂದರೆ, ಅವಳು ವೇಶ್ಯಾಪುತ್ರಿಯು" ಎಂಬ ಶಬ್ದಗಳನ್ನು ಅವನು ಹಲವು ಸಾರೆ ಹಲವು ಬಗೆಯಾಗಿ ತನ್ನ ಬಾಯಿಂದ ಉಚ್ಚರಿಸಿದನು ತನ್ನ ಬಾಯಿಯ ಆ ಉಚ್ಚಾರಗಳನ್ನು ಸ್ವಂತದ ಕಿವಿಯಿಂದ ಕೇಳಿದನು; ಆದರೆ ಅದಾವುದೂ ಅವನಿಗೆ ರುಚಿಸಲಿಲ್ಲ ಅವನು ಶಾರದೆಯನ್ನು ತ್ಯಜಿಸಿದೆನೆಂದು ಮನಸಿನಲ್ಲಿ ಒಮ್ಮೆ ತಿಳಕೊಂಡನು. ಇಂದು ಶಾರದೆಯು ತನ್ನ ಮನೆಯಲ್ಲಿಲ್ಲ, ತನ್ನ ದೃಷ್ಟಿಪಥದಲ್ಲಿಲ್ಲ; ಕಣ್ಣು ಮುಚ್ಚಿ ದರೂ ಕಾಣಲಿಲ್ಲ; ಇನ್ನು ಅವಳು ತನ್ನವಳಲ್ಲ. ಅವಳು ಧರಿಸಿದ ವಸ್ತ್ರ ಪ್ರಾವರಣಗಳಾಗಲಿ, ವಸ್ತ್ರ-ಒಡವೆಗಳಾಗಲಿ ಅಥವಾ ಅವಳ ದೇಹದ ಆಕೃತಿ ಯಾಗಲಿ ತನ್ನ ಕಣ್ಣಿಗೆ ಕಾಣಬಾರದು, ಎಂದು ಅವನು ಸಾವಿರಾರು ಬಗೆ ಯಿಂದ ಪ್ರಯತ್ನಿಸಿದರೂ ಅದು ಸಾಧ್ಯವಾಗಲಿಲ್ಲ. ಅದರಿಂದ ಮಾರ್ತಂಡ ರಾಯನು ಹೇಳಿದಂತೆ ನಡೆಯುವದು ಅವನಿಗೆ ತೀರ ಅಶಕ್ಯವಾಯಿತು. ಆ ಕಾರ್ಯವನ್ನು ಶಕ್ಯಮಾಡಿ ತೋರಿಸುವ ಶಕ್ತಿಯು ಮನುಷ್ಯನಲ್ಲಿದೆಯೋ ಇಲ್ಲವೋ ಎಂಬದನ್ನು ಕೂಡ ಆತನು ನಿಶ್ಚಯಿಸದಾದನು. ಅವನು ನಿರ್ಜೀ ವಿಯಂತೆ ಸುಮ್ಮನೆ ಆ ಹಾಸುಗೆಯ ಮೇಲೆ ಬಿದ್ದುಕೊಂಡನು. ಮಾನಸಿಕ ತಾಪದಿಂದ ತೀರ ಜರ್ಜರನಾದ ಆತನಿಗೆ ಕೆಲಹೊತ್ತಿನಲ್ಲಿಯೇ ನಿದ್ದೆಹತ್ತಿತು.

ಆ ನಿದ್ರೆಯಲ್ಲಿ ಅವನು ಹಲವು ಕನಸುಗಳನ್ನು ಕಂಡನು. ಆ ಸ್ವಪ್ನಾವಸ್ಥೆಯಲ್ಲಿ ಅವನು ನಡು ನಡುವೆ ಎಚ್ಚರ ಹೊಂದುತ್ತಲೂ, ಎಚ್ಚತ್ತಾಗ ಮೈಕೈಗಳ ಅಸಹ್ಯವಾದ ನೋವನ್ನು ಅನುಭವಿಸುತ್ತಲೂ ಕಾಲಹರಣ ಮಾಡುತ್ತಿದ್ದನು. ಹೀಗೆ ಆತನು ಎಷ್ಟೋ ಹೊತ್ತಿನ ವರೆಗೆ ಸ್ವಪ್ನ-ಸುಷುಪ್ತ್ಯಾವಸ್ಥೆಗಳನ್ನು ಹೊಂದಿದ ಬಳಿಕ ಮೂರೂಸಂಜೆಯ ಹೊತ್ತಿಗೆ ಸಂಪೂರ್ಣವಾಗಿ ಎಚ್ಚತ್ತು ಎದ್ದು ಕುಳಿತನು. ಆಗ ಆತನು ತೀರ ನಿರ್ವಿಣ್ಣಕಾಯನಾಗಿದ್ದನು. ಅವನಲ್ಲಿ ಮಾಯಾ-ಮಮತೆ, ರಾಗ-ಲೋಭ ಮುಂತಾದವುಗಳಿಗೆ ಎಡೆಯೇ ಇರಲಿಲ್ಲ. ಕೇವಲ ಒಂದು ಬಗೆಯ ಅವ್ಯಕ್ತ ಮತ್ತು ಅಬೋಧವಾದ ಲಜ್ಜೆಯ ಭಾವದಿಂದ ಆತನ ಮನಸ್ಸು ಹಾಗು ದೇಹಗಳು ಕ್ರಮವಾಗಿ ಶಕ್ತಿಗುಂದಿ, ತಲೆಬಾಗಿ ನೆಲಕ್ಕೆ ಬೀಳುವ ಉಪಕ್ರಮದಲ್ಲಿದ್ದವು.

ಆ ಕಾಲಕ್ಕೆ ಒಬ್ಬ ಸೇವಕನು ಕೈಯಲ್ಲಿ ದೀಪವನ್ನು ಹಿಡಿದುಕೊಂಡು ಆತನ ಕೋಣೆಯ ಬಾಗಿಲಿಗೆ ಬಂದು, ಒಳಗಿಂದ ಇಕ್ಕಿದ ಬಾಗಿಲವನ್ನು ದೂಡಿ ದೂಡಿ ಸಪ್ಪಳ ಮಾಡತೊಡಗಿದನು. ಕೂಡಲೆ ಚಂದ್ರಕಾಂತನು ಮಂಚದಿಂದ ಎದ್ದು ಬಾಗಿಲ ತೆರೆದನು. ದೀಪವು ಕಣ್ಣಿಗೆ ಕಾಣಿಸಿದೊಡನೆಯೇ ಆತನ ಕಣ್ಣೆದುರಿಗೆ ಕುಣಿಯುತ್ತಿದ್ದ ಇದುವರೆಗಿನ ಆ ಮೋಹದ ಚಿತ್ರಪಟಗಳೆಲ್ಲ ಅನ್ನಷ್ಟಕ್ಕೆ ತಾನೇ ಮಾಯವಾಗಿ ಹೋದವಲ್ಲದೆ, ಅದುವರೆಗೆ ನಡೆದ ಸಂಗತಿಯು ನಿಜವಾಗಿರಬಹುದೇ? ಎಂಬ ಅನುಮಾನವೂ ಆತನಲ್ಲಿ ಉಂಟಾಯಿತು. ಆ ಸಂಗತಿಯು ಶಾರದೆಗೆ ಗೊತ್ತಿರುವದೆ? ಗೊತ್ತಿದ್ದೂ ಗೊತ್ತಿಲ್ಲದವಳಂತೆ ಅವಳು ತನ್ನೆದುರಿಗೆ ಇದು ವರೆಗೆ ನಟಿಸಿರಬಹುದೇ? ಹೀಗೆ ತನ್ನನ್ನು ವಂಚಿಸಿ, ತನ್ನ ಸರ್ವನಾಶಕ್ಕೆ ಅವಳೇ ಪ್ರವೃತ್ತಳಾಗಿರಬಹುದೇ? ಮುಂತಾದ್ದರ ಬಗ್ಗೆ ಅವನು ಯಾವ ಬಗೆಯ ನಿಶ್ಚಯವನ್ನೂ ಮಾಡದಾದನು. ಕೂಡಲೆ ಅವನು ಆ ತನ್ನ ಕೋಣೆಯಲ್ಲಿ ಹೆಚ್ಚು ಕಾಲ ಕಳೆಯದೆ, ತ್ವರಿತ ಗತಿಯಿಂದ ಶಾರದೆಯ ಕೋಣೆಗೆ ಹೊರಟು ಹೋದನು.

ಶಾರದೆಯು ಆ ಕೋಣೆಯೊಳಗಿನ ದೀಪದ ಎದುರಿಗೆ ಸುಮ್ಮನೆ ಕುಳಿತುಕೊಂಡಿದ್ದಳು. ಗಂಡನು ತಾನಾಗಿ ತನ್ನ ಕೋಣೆಗೆ ಬಂದದ್ದನ್ನು ಕಂಡು ಅವಳು ಸಂಭ್ರಮದಿಂದ ಎದ್ದು ನಿಂತಳು. ಆಗ ಅವಳ ಮುಖದ ಮೇಲೆ ಅಂಜಿಕೆಯದಾಗಲಿ, ಉದ್ವೇಗ-ವಿಷಾದಗಳದಾಗಲಿ ಒಂದಿಷ್ಟೂ ಚಿಹ್ನವಿರಲಿಲ್ಲ; ಅಥವಾ ಕೇವಲ ಉತ್ಸಾಹಭರಿತ ಮೊಗದಾವರೆಯೂ ಆಗ ಅವಳದಾಗಿರಲಿಲ್ಲ. ಚಂದ್ರಕಾಂತನು ಅಲ್ಲಿಗೆ ಹೋದವನೇ:—ಶಾರದೇ, ಎಲ್ಲವನ್ನೂ ಕೇಳಿದೆಯಾ? ಎಂದು ಪ್ರಶ್ನೆ ಮಾಡಿದನು.

ಶಾರವೆಯು ಸಮ್ಮತಿಸೂಚಕವಾಗಿ ಗೋಣು ಅಲ್ಲಾಡಿಸಿ:—ಕೇಳಿ ದೆನು, ಎಂದಳು.

"ಅದೆಲ್ಲ ನಿಜವೇ ಏನು?"

"ನಿಜವು"

ಕೂಡಲೆ ಚಂದ್ರಕಾಂತನು ಅಲ್ಲಿಯ ಮಂಚದ ಮೇಲಿನ ಹಾಸುಗೆಯ ಮೇಲೆ ಒಮ್ಮೆಲೆ ಕುಸಿಕುಳಿತನು; ಹಾಗು ಅವನು:—ಶಾರದೇ, ಇದುವರೆಗೆ ನೀನು ಆ ಸಂಗತಿಯನ್ನು ನನಗೇಕೆ ತಿಳಿಸಿರಲಿಲ್ಲ

"ಹೇಳಕೂಡದೆಂದು ಅಪ್ಪನು ಕಟ್ಟಪ್ಪಣೆ ಮಾಡಿದ್ದಳು; ಅಲ್ಲದೆ ತಾವೂ ಇದುವರೆಗೆ ಅದನ್ನು ಕೇಳಿರಲಿಲ್ಲ."

"ನೀನು ನಿನ್ನ ತಾಯಿಗೆ ಚೆನ್ನಾಗಿ ಉಪಕಾರ ಮಾಡಿರುವೆ. ಅದ ಕ್ಕಾಗಿಯೇ ನೀನು ನನ್ನನ್ನು ಈ ಪರಿ ವಂಚಿಸುತ್ತಿರುವೆಯಲ್ಲವೆ?"

ಶಾರದೆಯು ಬಾಯಿಂದ ಪಿಟ್ಟೆಂದುಸುರದೆ, ಅಧೋವದನಳಾಗಿ ನಿಂತು ಕೊಂಡಳು.

ಕೆಲ ಕ್ಷಣಗಳ ನಂತರ ಚಂದ್ರಕಾಂತನೇ ಮತ್ತೆ:—ಶಾರದೇ, ಇದು ವರೆಗೆ ನೀನು ಆಗಾಗ್ಗೆ ಬೆಚ್ಚಿಬಿದ್ದು ಅಂಜುವ ಹಾಗು ಇಂಥ ಸೌಖ್ಯದಲ್ಲಿಯೂ ದುಃಖಿತಳಾಗುವ ಮುಂತಾದ ನಿನ್ನ ಎಲ್ಲ ಆಚರಣೆಯ ಮೇಲೆ ಇಂದು ಚೆನ್ನಾಗಿ ಪ್ರಕಾಶ ಬಿದ್ದಂತಾಯಿತು. ಇದಕ್ಕಾಗಿಯೇ ನೀನು ನಿನ್ನ ತಾಯಿ ಯನ್ನು ಇಲ್ಲಿಗೆ ಕರೆತರಲು ಸಮ್ಮತಿಸಲಿಲ್ಲವಷ್ಟೇ?

ಶಾರದೆಯು ಸಮ್ಮತಿಸೂಚಕ ಗೋಣು ಅಲ್ಲಾಡಿಸಿದಳು.

ಕ್ಷಣ ಕಾಲದಲ್ಲಿ ತನ್ನ ಲಗ್ನದ ಮುಂಚಿನ ಎಲ್ಲ ಸಂಗತಿಗಳ ನೆನಪೂ ಚಂದ್ರಕಾಂತನಿಗೆ ಚೆನ್ನಾಗಿ ಆಯಿತು. ತನ್ನ ಆ ಕಾಶೀ ವಾಸವೂ, ಶಾರದೆಯ ತಾಯಿಯ ಆ ಸುಂದರ ವಿಧವಾ ಮೂರ್ತಿಯೂ, ಆಕೆಯ ಆ ಕೃತಜ್ಞತಾ ದ್ಯೋತಕ ಸತೇಜವೂ-ಸಜಲವೂ ಆದ ದೃಷ್ಟಿಯೂ, ಸೌಮ್ಯ ಮತ್ತು ಶಾಂತ ವಾದ ಮಾತು-ಕಥೆಗಳೂ ಚಂದ್ರಕಾಂತನಿಗೆ ಸ್ಮರಣವಾಗಲು, ಅವನ ಅಂತಃಕರಣವು ಕರಗಿ ನೀರು-ನೀರಾಯಿತು! ಕೂಡಲೆ ಆತನು:—"ಶಾರದೇ, ನೀನು ನಿನ್ನ ತಾಯಿಯ ವಿಷಯದ ಆ ಎಲ್ಲ ಸಂಗತಿಯನ್ನೂ ನನಗೆ ಬಿಚ್ಚಿ ತಿಳಿಸುವೆಯಾ?"

"ತಿಳಿಸುವೆನು. ನಮ್ಮ ಸೋದರಮಾವನ ಊರು ಪಂಢರಪುರದ ಬಳಿಯ ಸಾಂಗೋಲೆಯು. ವೈಶ್ಯರ ರಾಮಣ್ಣನೂ ಆ ಊರವನೇ. ತನ್ನ ಬಾಲ್ಯಕಾಲದಿಂದಲೂ ನನ್ನ ತಾಯಿಯು ಆತನನ್ನು ಪ್ರೀತಿಸುತ್ತಿರುವಳು.

ಅವರಿಬ್ಬರಲ್ಲಿ ಲಗ್ನನಾಗುವದು ಕೂಡ ಗೊತ್ತಾಗಿತ್ತಂತೆ; ಆದರೆ ಆತನು ಹೀನ ಯಾತಿಯುವನೆಂದು ತಿಳಿದು, ಆಪ್ತರಿಷ್ಟರು ಹಾಗಾಗಗೊಡಲಿಲ್ಲ. ನನ್ನ ತಂದೆಯ ಊರು ನಮ್ಮ ಮಾವನ ಊರ ಆಚೆಗೆ ಸೊಲ್ಲಾಪುರ. ನಾನು ಮೂರು ವರ್ಷದವಳಿದ್ದಾಗಲೇ ನನ್ನ ತಂದೆಯು ಗತಿಸಿದನು. ಕೂಡಲೆ ನನ್ನನ್ನು ಕಟ್ಟಿಕೊಂಡು ನನ್ನ ತಾಯಿಯು ತನ್ನ ಅಣ್ಣನ ಮನೆಗೆ-ಸಾಂಗೋಲೆಗೆ ಬಂದಳು. ಬಳಿಕ ನನಗೆ ಐದುವರ್ಷಗಳಾದಾಗ ನನ್ನನ್ನು ಕಟ್ಟಿಕೊಂಡು ನನ್ನ ತಾಯಿಯು............" ಎಂದೆಂದು ಸುಮ್ಮನಾಗಲು,

ಚಂದ್ರಕಾಂತನು ಅವಳನ್ನು ಸುಮ್ಮನಿರಗೊಡದೆ, ಒಳ್ಳೇ ಉತ್ಸುಕತೆಯಿಂದ:—ಹೂಂ, ಮುಂದೇನಾಯಿತು? ಎಂದು ಕೇಳಿದನು.

"ಅಲ್ಲಿಂದ ನಾವು ವಾಡಿಗೆ ಹೋದೆವು. ವಾಡಿಯಿಂದ ನಾಶಿಕಕ್ಕೆ ಹೋದೆವು. ಅಲ್ಲಿಂದ ತ್ರ್ಯಂಬಕೇಶ್ವರ, ಪೈಠಣ ಮುಂತಾದ ಕ್ಷೇತ್ರಗಳನ್ನು ಸುತ್ತುತ್ತ ಕಡೆಗೆ ಕಾಶಿಗೆ ಹೋದೆವು. ಕಾಶಿಗೆ ತಲುಪುವಷ್ಟರೊಳಗೇ ವೈಶ್ಯರ ರಾಮಣ್ಣನು ಸೆರೆಕುಡಿಯುವ ಅಭ್ಯಾಸ ಮಾಡಿದ್ದನು. ಆಗ್ಗೆ ನನ್ನ ತಾಯಿಯ ಮೈಮೇಲೆ ಕೆಲವು ಅಲಂಕಾರಗಳಿದ್ದವು. ಅವುಗಳನ್ನು ಪಡೆಯುವದಕ್ಕಾಗಿ ಆತನು ದಿನಾಲು ಅವಳೊಡನೆ ನ್ಯಾಯಾಡಹತ್ತಿದನು. ಒಂದು ದಿನ ರಾತ್ರಿ ನಾವಿಬ್ಬರೂ ತಾಯಿ-ಮಗಳು ಗಾಢ ನಿದ್ರಾಸಕ್ತರಾಗಿರಲು, ಅವನು ಅವ್ವನ ಬಳಿಯ ಆ ವಸ್ತಗಳನ್ನು ಎತ್ತಿಕೊಂಡೊಯ್ದನು. ಆಗ ನಮ್ಮ ತಾಯಿಯ ಬಳಿಯಲ್ಲಿ ಒಂದು ದುಡ್ಡು ಕೂಡ ಸಿಲ್ಕಿರಲಿಲ್ಲ. ಅಂದಿನಿಂದ ೭-೮ ದಿನಗಳ ವರೆಗೆ ನಾವಿಬ್ಬರೂ ಆ ಕಾಶೀ ಪಟ್ಟಣದಲ್ಲಿ ಭಿಕ್ಷೆ ಬೇಡಿ ಉಪಜೀವಿಸಿದೆವು. ತದನಂತರ ನನ್ನ ತಾಯಿಯು ಆ ಹರಭಟ್ಟರಲ್ಲಿ ಅಡುಗೆಗಾಗಿ ನಿಂತಳು........

ಆ ಸಂಗತಿಯನ್ನು ಕೇಳಿ ಚಂದ್ರಕಾಂತನ ತಲೆಯು ಭ್ರಮಿಸತೊಡಗಿತು. ಅವನು ತನ್ನ ಕ್ರೂರ ದೃಷ್ಟಿಯನ್ನು ಶಾರದೆಯ ಅವನತ ಮುಖದ ಮೇಲೆ ಇಟ್ಟು, ಒಳ್ಳೇ ಕಠೋರವಾಗಿ:—ಶಾರದೇ, ಥೂ, ನಿನ್ನ ಬಾಳಿಗೆ! ನೀನು ಇಂಥ ಕುಲಹೀನಳೇ? ನಿನಗೆ ಇದೆಲ್ಲವೂ ಗೊತ್ತಿದ್ದು, ನೀನು ನನ್ನ ಸರ್ವನಾಶಕ್ಕೆ ಕಾರಣಳಾದೆಯಲ್ಲವೆ? ಶಾರದೇ, ನೀನು ಇಂಥ ಪಾಪಿಷ್ಠಳಿರಬಹುದೆಂಬದನ್ನು ನಾನು ಸ್ವಪ್ನದಲ್ಲಿ ಕೂಡ ಭಾವಿಸಿರಲಿಲ್ಲ!

ಶಾರದೆಯ ಕಣ್ಣುಗಳಿಂದ ಟಪಟಪನೆ ನೀರುದುರ ಹತ್ತಿದವು. ಅವಳು ಚಂದ್ರಕಾಂತನ ನುಡಿಗಳನ್ನು ಕೇಳುತ್ತ ಅಧೋವದನದಿಂದ ನಿಶ್ಶಬ್ದಳಾಗಿ ನಿಂತಿದ್ದಳು.

ಚಂದ್ರಕಾಂತನ ಲಕ್ಷ್ಯವು ಅವಳ ಆ ಕಣ್ಣೀರ ಪ್ರವಾಹದ ಕಡೆಗಿರಲಿಲ್ಲ. ಅದರಿಂದ ಅವನು ಮತ್ತಿಷ್ಟು ಕಠೋರ ಸ್ವರದಿಂದ:—ಶಾರದೇ, ಇನ್ನು ಇದಕ್ಕೆ ಉಪಾಯವೇನು?

ಶಾರದೆಯು ತನ್ನ ಕಣ್ಣೀರನ್ನೊರೆಸಿಕೊಳ್ಳುತ್ತ ಮೆಲ್ಲಮೆಲ್ಲನೆ:—ತಾವೇ ಹೇಳಬೇಕು.

ಹಾಗಾದರೆ ನನ್ನ ಬಳಿಗೆ ಬಂದು ಕೂಡ್ರು.

ಕೂಡಲೆ ಶಾರದೆಯು ಹತ್ತರ ಬಂದು ಕೂಡ್ರಲು, ಚಂದ್ರಕಾಂತನು ಅವಳ ಮುಂಗೈಯನ್ನು ಗಟ್ಟಿಯಾಗಿ ಹಿಡಿದು:—ಜನರೆಲ್ಲರೂ ನಿನ್ನನ್ನು ತ್ಯಜಿಸಲಿಕ್ಕೆ ಹೇಳುತ್ತಿರುವರು; ಆದರೆ ಆ ಸಾಹಸವು ನನ್ನಿಂದಾಗಲೊಲ್ಲದು; ನಿನ್ನ ಮೇಲಿನ ವಿಶ್ವಾಸವೂ ಉಳಿಯಲೊಲ್ಲದು; ನನಗೆ ಜಗತ್ತೇ ಶೂನ್ಯವಾಗಿ ತೋರಹತ್ತಿದೆ.

ಅತು-ಅತ್ತು ಬಿಳುಪೇರಿದ್ದ ಶಾರದೆಯ ಮುಖಮಂಡಲದ ಮೇಲೆ ಒಮ್ಮೆಲೆ ಆರಕ್ತಕಾಂತಿಯುಂಟಾಯಿತು. ಕಣ್ಣುಗಳೊಳಗಿನ ಅಶ್ರುಗಳು ಕಟ್ಟಾಗಿ ಅವು ಒಳ್ಳೇ ಚಮಕಿತವಾದವು. ಆಗ ಅವಳು:—ಪ್ರಾಣನಾಥ! ನನ್ನಲ್ಲಿ ತಮ್ಮ ವಿಶ್ವಾಸವಿಲ್ಲವೆ? ಎಂದು ಕೇಳಲು,

"ಇಲ್ಲ; ಎಷ್ಟು ಮಾತ್ರವೂ ಉಳಿದಿಲ್ಲ. ಕಾರಣವೇನೆಂಬದು ಗೊತ್ತೇ ಇದೆ!"

ಶಾರದೆಯು ತನ್ನ ಸ್ವಾಮಿಯ ಮುಖದ ಹತ್ತಿರಕ್ಕೆ ತನ್ನ ಮುಖವನ್ನೊಯ್ದು:—ನೀವು ನನ್ನನ್ನು ಎಷ್ಟು ಪ್ರೀತಿಸುತ್ತಿರುವಿರೆಂಬದು ನಿಮ್ಮದು ನಿಮಗೇ ಗೊತ್ತು. "ಶಾರದೇ, ನಿನ್ನ ಮುಖವನ್ನೇ ಯಾವಾಗಲೂ ನೋಡುತ್ತ ಕುಳ್ಳಿರಬೇಕೆಂದು ನನಗನಿಸುತ್ತದೆ"ಂದು ನೀವು ಹಿಂದಕ್ಕೊಮ್ಮೆ ಅಂದ ನೆನಪು ನಿಮಗಿದೆಯಲ್ಲವೆ? ಇಂದು ನೀವು ಕೆಲ ಕ್ಷಣಗಳ ವರೆಗಾದರೂ ನನ್ನ ಮುಖವನ್ನು ಚೆನ್ನಾಗಿ ದಿಟ್ಟಿಸಿ ನೋಡಬೇಕು; ಅಂದರೆ ನಿಮ್ಮ ಮನಸ್ಸಿಗೆ ತುಸ ಶಾಂತಿಯುಂಟಾದೀತು; ಅಲ್ಲದೆ ನಾನು ನಿಮಗೊಂದುಪಾಯವನ್ನು ಹೇಳಬೇಕೆಂದಿರುವೆನು. ಕೇಳಿಕೊಳ್ಳುವಿರೇನು? ಎಂದು ಗಟ್ಟಿಮನಸ್ಸು ಮಾಡಿ ನುಡಿಯಲು,

ಕೇಳುವೆನು; ಹೇಳು ನೋಡೋಣ-ಅದಾವುದೆಂಬುದನ್ನು?

ಇಂದು ನಾನು ವಿಷ ತಿಂದು ನಿಮ್ಮೆದುರಿಗೇ ಪ್ರಾಣ ನೀಗಬೇಕೆಂದಿರುತ್ತೇನೆ.

ಚಂದ್ರಕಾಂತನು ಮತ್ತಿಷ್ಟು ದಿಟ್ಟಿಸಿ ಶಾರದೆಯ ಕಡೆಗೆ ನೋಡತೊಡಗಿದನು; ಹಾಗು ಬಾಯಿಂದ:—ಶಾರದೇ, ಆಗಬಹುದು; ನೀನು ವಿಷಪ್ರಾಶನ ಮಾಡಬಲ್ಲೆಯಾ ?

ಅವಶ್ಯವಾಗಿ ಕುಡಿಯುತ್ತೇನೆ.

ಒಳ್ಳೇ ಗುಪ್ತವಾಗಿ ಹಾಗು ಒಳ್ಳೇ ಸಾವಧಾನದಿಂದ ಅದನ್ನು ನೆರವೇರಿಸುವೆಯಾ ?

ಹಾಗೆಯೇ ಮಾಡುವೆನು.

ಇಂದೇ ಕುಡಿಯುವೆಯಾ ?

"ಇಂದೇ;-ಬೇಕಾದರೆ ಈಗಲೇ ಕುಡಿಯುವೆನು." ಎಂದು ಶಾರದೆಯು ನುಡಿಯುತ್ತಿರಲಿಕ್ಕೆ ಚಂದ್ರಕಾಂತನು ಅಲ್ಲಿಂದ ಹೊರಟು ನಡೆದನು. ಆಗ ಶಾರದೆಯು ಅವನನ್ನು ಹೋಗಗೊಡದೆ, ಆತನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು:—ತಾವು ನನ್ನನ್ನಿಷ್ಟು ಆಶೀರ್ವದಿಸಿ ಹೋಗಲಾರಿರಾ ?

ಕೂಡಲೆ ಚಂದ್ರಕಾಂತನು ಆಕಾಶದ ಕಡೆಗೆ ದೃಷ್ಟಿಯನ್ನು ತಿರುವಿ:— ಈಗ ನಾನು ನಿನ್ನ ಬಗ್ಗೆ ಏನನ್ನೂ ಮಾಡಲಾರೆನು. ನಿನ್ನ ಮೃತದೇಹವು ಯಾವಾಗ ನನ್ನ ಕಣ್ಣಿಗೆ ಕಾಣುವದೋ, ಆಗ ನಾನು ನಿನ್ನನ್ನು ಮನಸೋಕ್ತ ಆಶೀರ್ವದಿಸುವೆನು.

ಶಾರದೆಯು ಆತನ ಪಾದಪದ್ಮಗಳಿಗೆ ನ್ಪೊಡಮುಟ್ಟು:—ಹಾಗೆಯೇ ಆಗಲಿ, ಎಂದಂದಳು.

ಚಂದ್ರಕಾಂತನು ಮತ್ತೆ ಅಲ್ಲಿಂದ ಹೊರಡಲನುವಾಗಲು, ಅವಳು ಭರದಿಂದ ಹೋಗಿ ಆ ಕೋಣೆಯ ಬಾಗಿಲಿಗೆ ಅಡ್ಡಗಟ್ಟಿ ನಿಂತು:—ನನ್ನ ವಿಷಪ್ರಾಶನದಿಂದ ತಮಗಾವ ಅನಿಷ್ಟವೂ ಉಂಟಾಗಲಿಕ್ಕಿಲ್ಲವಷ್ಟೆ ?

ಏನೂ ಇಲ್ಲ.

ಯಾರೂ ಯಾವ ಬಗೆಯಿಂದಲೂ ಸಂಶಯಪಡಲಾರರಷ್ಟೇ ?

ನಿಶ್ಚಯವಾಗಿಯೂ ಕೆಲವರು ಸಂಶಯಪಡುವರು; ನಾನು ಸಾಕಷ್ಟು ಹಣವನ್ನು ಖರ್ಚಮಾಡಿ, ಅವರ ಬಾಯನ್ನು ಕಟ್ಟುಮಾಡುವೆನು.

ಶಾರದೆಯು:—ನಾನು ನನ್ನ ಅಂತ್ಯಕಾಲದಲ್ಲಿ ನನ್ನ ಹಾಸಿಗೆಯ ಕೆಳಗೆ ಒಂದು ಪತ್ರವನ್ನಿಡುವೆನು; ಅದನ್ನಷ್ಟು ನೋಡಿಕೊಳ್ಳಿರಿ; ಅಂದರಾಯಿತು.

ಚಂದ್ರಕಾಂತನ ಅಂತರಂಗವು ದ್ರವಿಸಿತು; ಅವನ ಮುಖದ ಮೇಲಿನ ಕಠೋರ ನಿಶ್ಚಯವೂ ಅಡಗಿತು. ಅವನು ಶಾರದೆಯನ್ನು ಮಗ್ಗಲಿಗೆ ಎಳೆದು,

ಅಪ್ಪಿಕೊಂಡು:—ಹಾಗೆಯೇ ಮಾಡು. ನಿನ್ನ ಸಂಗತಿಯನ್ನೆಲ್ಲ ಸ್ಪಷ್ಟವಾಗಿ ಬರೆದು, ಅದರ ಕೆಳಗೆ ಸ್ವಾಕ್ಷರದ ರುಜು ಮಾಡಿಡಲಿಕ್ಕೆ ಮರೆಯಬೇಡ. ಅಂದರೆ ನಾನು ನಿನ್ನನ್ನು ಕೊಲೆಗೆಯ್ದಿರುವೆನೆಂದು ಯಾರಿಗೂ ಸಂಶಯ ವುಳಿಯಲಿಕ್ಕಿಲ್ಲ. ನಿನಗೆ ಇನ್ನೊಂದು ಸಂಗತಿಯನ್ನು ಸೂಚಿಸುವದುಳಿದಿದೆ. ನೀನು ವಿಷಪ್ರಾಶನ ಮಾಡುವಾಗ ನಿನ್ನ ಕೋಣೆಯ ಬಾಗಿಲು-ಕಿಟಕಿಗಳನ್ನು ಒಳಗಿನಿಂದ ಚನ್ನಾಗಿ ಭದ್ರಪಡಿಸಿಕೋ; ಅಂದರೆ ನಿನ್ನ ಮರಣಕಾಲದ ಒಂದಿಷ್ಟು ಶಬ್ದವೂ ಮನೆಯೊಳಗಿನವರಾರಿಗೂ ಕೇಳಬರಲಿಕ್ಕಿಲ್ಲ; ನನಗೂ ಕೇಳಿಸಲಿಕ್ಕಿಲ್ಲ.

ಶಾರದೆಯು ದಾರಿ ಬಿಟ್ಟುಕೊಟ್ಟು, ಆತನಿಗೆ ಇನ್ನೊಮ್ಮೆ ನೆಲಮುಟ್ಟಿ ನಮಸ್ಕಾರ ಮಾಡಿ, ಆತನ ಪಾದಧೂಲಿಯನ್ನು ತನ್ನ ತಲೆಯ ಮೇಲೆ ಧರಿಸಿ ಕೊಂಡು:--"ಇನ್ನು ಮೇಲೆ ತಾವು ತಮ್ಮ ಇಷ್ಟದಂತೆ ಹೊರಡಬಹುದು" ಎಂದವಳೇ, ಮತ್ತೆ ಏನನ್ನೋ ಜ್ಞಾಪಿಸಿಕೊಂಡು:—"ತಡೆಯಿರಿ, ಇನ್ನೊಂದು ಕ್ಷಣ ತಡೆಯಿರಿ" ಎನ್ನುತ್ತ ಕೋಣೆಯೊಳಗಿನ ದೀಪವನ್ನು ಹತ್ತರ ತಂದು, ಚಂದ್ರಕಾಂತನ ಮುಖವನ್ನು ಒಳ್ಳೇ ದಿಟ್ಟಿಸಿ ನೋಡಿದಳು. ಆಗ ಅವಳಿಗೆ ಏನೋ ಅನುಮಾನವುಂಟಾಯಿತು. ಅಷ್ಟರಲ್ಲಿ ಆತನ ಉರಿಗಣ್ಣೊಳಗಿಂದ ಟಪ್ಪ-ಟಪ್ಪೆಂದು ೨-೩ ಹನಿಗಳು ನೆಲಕ್ಕುದುರಿದವು.

ಚಂದ್ರಕಾಂತನು ತನ್ನ ಕಂಬನಿಗಳನ್ನೊರೆಸಿಕೊಳ್ಳುತ್ತ:—"ಶಾರದೇ, ನೀನು ನನ್ನ ಮುಖವನ್ನು ಇಷ್ಟೇಕೆ ದಿಟ್ಟಿಸಿ ನೋಡುತ್ತೀಯೇ?"

ಕ್ಷಣಕಾಲವೇ ಯೋಚಿಸಿ ನಂತರ ಶಾರದೆಯು:—"ಏನೂ ಇಲ್ಲ; ಹೊರಡಬಹುದು" ಎಂದಂದಳು.

ಕೂಡಲೆ ಚಂದ್ರಕಾಂತನು ಮೆಲ್ಲಮೆಲ್ಲನೆ ಅಲ್ಲಿಂದ ಹೊರಟು ಹೋದನು. ಹೋಗುವಾಗ ಆತನ ಬಾಯಿಂದ "ಆದದ್ದೇನೂ ಸರಿಯಾಗಲಿಲ್ಲ" ಎಂಬ ವಾಕ್ಯವು ಅಸ್ಫುಟವಾಗಿ ಹೊರಬಿದ್ದು ಹೋಯಿತು!

---

## ೮ನೇ ತರಂಗ:—**ಕಾರಾಗೃಹದ ಶಿಕ್ಷೆ.**

ಶಾರದೆಯು ಆ ರಾತ್ರಿಯಲ್ಲಿ ತನ್ನ ಕೋಣೆಯಲ್ಲಿ ಹುದುಗಿಕೊಂಡು ಕುಳಿತು ಆಲೋಚಿಸಹತ್ತಿದಳು. ಎಷ್ಟು ಸಾರೆ ನಿಶ್ಚಯಿಸಿಕೊಂಡರೂ ಅವ ಳಿಂದ ವಿಷಪಾನ ಮಾಡುವ ಸಾಹಸವಾಗಲಿಲ್ಲ. ಆಗ ಅವಳ ಬಾಯಿಂದ:— "ನಾನೊಬ್ಬಳೇ ಆಗಿದ್ದರೆ ಈ ಕೆಲಸವನ್ನು ಯಾವಾಗಲೋ ತೀರಿಸಿಬಿಡುತ್ತಿ

ದ್ದೆನು; ಆದರೆ ನಾನಂತೂ ಈಗ ಏಕಾಕಿನಿಯಾಗಿಲ್ಲ-ಬಸಿರಾಗಿರುತ್ತೇನೆ. ನನಗೆ ಈಗ ಮಾತೃಪದವು ಪ್ರಾಪ್ತವಾಗಿರುತ್ತವೆ. ತಾಯಿಯು ತನ್ನ ಶಿಶುವನ್ನು ಸಂಹರಿಸಬಹುದೇ? ಛೀ-ಛೀ! ಅದೆಂದಿಗೂ ಆಗದ ಮಾತು" ಎಂದಂದು ಸುಮ್ಮನಾದಳು; ಆದರೆ ತನ್ನ ಸುಖದ ದಿನಗಳು ಮಾತ್ರ ನಿಃಶೇಷವಾದವೆಂಬ ಬಗ್ಗೆ ಅವಳಿಗೆ ಇನ್ನು ಲೇಶ ಮಾತ್ರವೂ ಅನುಮಾನವಿರಲಿಲ್ಲ.

ಮಧ್ಯರಾತ್ರಿಯ ಸಮಯಕ್ಕೆ ಚಂದ್ರಕಾಂತನು ಒಮ್ಮೆಲೆ ಶಾರದೆಯ ಕೋಣೆಯನ್ನು ಪ್ರವೇಶಿಸಿದನು; ಹಾಗು ಆಕೆಯ ಬಾಯಿಂದ ಆಕೆಯ ಬಸಿರಿನ ಸಂಗತಿಯನ್ನೂ ವಿಷಪಾನ ಮಾಡುವ ಕಾರಣವನ್ನೂ ಕೇಳಿ ತಿಳಿದನು. ಅದನ್ನು ಕೇಳಿ ಅವನಿಗೆ ಒಂದು ಬಗೆಯ ಉನ್ಮಾದವಾದಂತಾಗಲು, ಅವನು ಆ ಆವೇಶದ ಭರದಲ್ಲಿ ಶಾರದೆಯನ್ನು ಎತ್ತಿ ಮುದ್ದಾಡಹತ್ತಿದನು; ಹಾಗು ಮೆಲ್ಲಮೆಲ್ಲನೆ:—"ಶಾರದೇ, ನೀನು ಇನ್ನು ಎಂದೂ ವಿಷಪ್ರಾಶನ ಮಾಡಬೇಡ; ಖಂಡಿತವಾಗಿಯೂ ಮಾಡಬೇಡ" ಎಂದು ಮತ್ತೆ ಮತ್ತೆ ಹೇಳಿದನು; ಆದರೆ ಆಗ ಅವನು ಶಾರದೆಗೆ ಅದಕ್ಕೂ ಹೆಚ್ಚಿನ ಅದಾವ ಭರವಸೆಯನ್ನು ಕೊಡ ಬಲ್ಲವನಾಗಿದ್ದನು? ತನ್ನ ಆ ವಿಶಾಲವಾದ ಮನೆಯಲ್ಲಿ ಶಾರದೆಯನ್ನಿರಸಲಿಕ್ಕೆ ಒಂದು ಸಣ್ಣ ಮೂಲೆಯು ಕೂಡ ಅವನಿಗೆ ಪ್ರಶಸ್ತಾಗಿ ತೋರಲಿಲ್ಲ! ಶಾರದೆಗಾಗಿ ಇಡಿ ಊರ ಜನರು ತನ್ನನ್ನು ತಿರಸ್ಕರಿಸಹತ್ತಿರುವರೆಂಬದು ಚಂದ್ರಕಾಂತನಿಗೆ ಗೊತ್ತಾಗಿತ್ತು. ಇಂಥ ಕಡು ದುಃಖಿತಾವಸ್ಥೆಯಲ್ಲಿ ತನ್ನು ಒಂದು ಅಶ್ರುಬಿಂದುವಿನಿಂದ ತಮ್ಮ ದುಃಖವನ್ನು ಶಾಂತಗೊಳಿಸಿಲಿಕ್ಕೆ ಅದಾರೂ ಸಹಾನುಭೂತಿ ತಾಳರೆಂಬದೂ ಅವನಿಗೆ ಗೊತ್ತಿತ್ತು. ಅಂತೆಯೇ ಆಗ ಅವನು ಹೆಚ್ಚು ಮಾತಾಡದಾದನು.

ಸ್ವಾಮಿಯ ಇಚ್ಛೆಯ ಮೇರೆಗೆ ಶಾರದೆಯು ವಿಷಪ್ರಾಶನದ ತನ್ನ ನಿಶ್ಚಯವನ್ನು ರಹಿತಗೊಳಿಸಿದಳು; ಆದರೆ ಮನೆಯೊಳಗಿನವರಿಗೆ ತನ್ನ ಮುಖ ತೋರಿಸಲಿಕ್ಕೆ ಕೂಡ ಅವಳಿಗೊಂದು ತರದ ನಾಚಿಕೆಯೂ ಅಂಜಿಕೆಯೂ ಉಂಟಾಗಹತ್ತಲು, ಮುಂದೆ ಏಳೆಂಟು ದಿನಗಳ ವರೆಗಿನ ಕಾಲವನ್ನು ಅವಳು ತನ್ನ ಕೋಣೆಯೊಳಗಿನ ನಿವಾಂತ ಸ್ಥಳದಲ್ಲಿ ಅಳುವದರಲ್ಲಿಯೇ ಕಳೆದಳು. ಅಷ್ಟರಲ್ಲಿ ಭಾದ್ರಪದ ಕೃಷ್ಣಪಕ್ಷವು ಮುಗಿಯ ಬಂತು. ಭಾದ್ರಪದ ಮಾಸದಲ್ಲಿ ತಮ್ಮ ಮನೆಯ ನಾಯಿ-ಬೆಕ್ಕುಗಳನ್ನು ಕೂಡ ಹೊರಗಟ್ಟಲಾಗದೆಂದೂ, ಪ್ರಮಾದದಿಂದ ಯಾರಾದರೂ ಅವುಗಳನ್ನು ಹೊರಗಟ್ಟಿದರೆ ಆ ಮನೆಯವರ ಸರ್ವನಾಶವು ಬೇಗನೆ ಆಗುವದೆಂದೂ ಚಂದ್ರಕಾಂತನ ಊರ ಜನರಲ್ಲಿ ಬಹು ಪುರಾತನ ಕಾಲದಿಂದಲೂ ರೂಢಿಯಾಗಿತ್ತು; ಆದರೆ ಚಂದ್ರಕಾಂತನು ಶಾರದೆ

ಯನ್ನು ಇನ್ನು ತಮ್ಮ ಮನೆಯಲ್ಲಿ ಹೆಚ್ಚು ದಿನಗಳ ವರೆಗೆ ಇರಿಸಿಕೊಳ್ಳು ವಂತಿರಲಿಲ್ಲ. ಶೀಘ್ರವೇ ಆವನು ಅವಳನ್ನು ಅಲ್ಲಿಂದ ಹೊರಗೆ ಹಾಕುವ ಬೇತು ನಡೆಸಿದ್ದನು.

ಒಂದು ದಿನ ಪ್ರಭಾತ ಕಾಲದಲ್ಲಿ ಶಾರದೆಯು ಚಂದ್ರಕಾಂತನ ಕೈ ಹಿಡಿದು ಬಹಳ ವಿನಯದಿಂದ:—"ಕಾಂತಾ, ನನ್ನ ದುರದೃಷ್ಟವನ್ನು ನಾನು ಭೋಗಿಸುವೆನು. ಇದಕ್ಕಾಗಿ ನೀವಿನ್ನು ದುಃಖಿಸುವ ಕಾರಣವಿಲ್ಲ. ನನ್ನಂಥ ಕುಲಕಲಂಕಿನಿಯನ್ನು ತಮ್ಮ ಮನೆಗೆ ತಂದು, ತಾವು ಇದುವರೆಗೆ ಅನುಭವಿ ಸಿದ ಕಷ್ಟನಷ್ಟಗಳೇ ಅಪರಿಮಿತವಾಗಿರಲು, ಕಡೆತನಕ ತಾವು ಅವುಗಳನ್ನು ಸಹಿ ಸುವ ಕಾರಣವಿಲ್ಲ. ತಾವು ನನ್ನನ್ನು ಇಲ್ಲಿಂದ ಹೊರಗಟ್ಟಿ, ಬೇರೊಬ್ಬಳನ್ನು ಲಗ್ನವಾಗಿ ಸುಖದಿಂದ ಜೀವಿಸಿರಿ; ಆದರೆ ಜನರ ಮಾತು ಕೇಳಿ, ನನ್ನಂತೆ ಅವಳನ್ನೂ ಸಂಸಾರಗೇಡಿಯನ್ನಾಗ ಮಾಡಬೇಡಿರಿ; ಎಚ್ಚರಿಕೆ!" ಎಂದಂದಳು.

ಚಂದ್ರಕಾಂತನು ಅದಕ್ಕೇನೆಂದು ಉತ್ತರ ಕೊಡುವನು? ನಿರುಪಾಯ ನಾಗಿ ಸುಮ್ಮನಿದ್ದನು, ಆದರೂ ಅವನಿಂದ ಹೆಚ್ಚು ಹೊತ್ತು ಸುಮ್ಮನಿರುವ ದಾಗಲಿಲ್ಲ. 'ಇದುವರೆಗೆ ಮಾತಾಡಿಸಿದರೂ ಹೆಚ್ಚಾಗಿ ಮಾತಾಡದ ಶಾರದೆ ಯು ಇತ್ತೀಚೆಗೆ ಬಲು ಮಾತಾಡಹತ್ತಿರುವಳು. ಇದುವರೆಗೆ ಇವಳು ನನ್ನಲ್ಲಿ ಎಷ್ಟು ಭಯ-ಭಕ್ತಿಗಳಿಂದ ನಡೆಕೊಳ್ಳುತ್ತಿದ್ದಳೋ ಈಗ ಅದೆಲ್ಲವನ್ನೂ ತ್ಯಜಿ ಸಿರುವಳು. ನಾಲ್ಕಾರು ದಿನಗಳ ಹಿಂದೆ ಇವಳು ಇಲ್ಲಿಯ ಸಾಮಾನ್ಯ ಸಂಗ ತಿಗೂ ಹೆಚ್ಚಾಗಿ ಅಂಜುತ್ತಿದ್ದಳು; ಆದರೆ ಈಗ ಇವಳ ಗುಪಿತ ಸಂಗತಿಗಳೆಲ್ಲ ಬಹಿರಂಗವಾಗಿವೆ. ಅದರಿಂದ ಇವಳು ಈಗ ಯಾವುದಕ್ಕೂ ಅಂಜದಾಗಿರು ತ್ತಾಳೆ' ಎಂದು ತಿಳಿದನು.

ಶಾರದೆಗೆ ಈ ಸಂಸಾರದಲ್ಲಿ ಗಂಡನ ಹೊರತು ಮತ್ತೆ ಯಾರೂ ಪ್ರೀತಿ ಸುವವರಿರಲಿಲ್ಲ; ಆದರೆ ಅಂಥ ಆ ಏಕಮಾತ್ರವಾದ ಪ್ರೇಮದ ಸ್ಥಾನ ವನ್ನು ಕೂಡ ಸಮಾಜವು ತನ್ನ ವರ್ಚಸ್ಸಿನ ಮೂಲಕ ಶಾರದೆಯಿಂದ ಕಸಿದು ಕೊಂಡಿತ್ತು. ಅದರಿಂದ ಅವಳೀಗ ನಿರ್ಮಮಳೂ, ನಿರ್ಲೋಭಿಯೂ, ಸರ್ವಸ್ವ ಹೀನಳೂ ಆದ ಸಂನ್ಯಾಸಿನಿಯಂತಾಗಿದ್ದಳು. ಅಂತೆಯೇ ಈಗ ಅವಳು ಗಂಡನೊಡನೆ ಅಷ್ಟು ಸ್ವಚ್ಛಂದದ ನಡೆ-ನುಡಿಗಳನ್ನಿಟ್ಟಿದ್ದಳು! ಚಂದ್ರಕಾಂತ ನು ಶಾರದೆಗೆ ಗೌಪ್ಯವಾಗಿ ವಿಷ ತಿಂದು ಪ್ರಾಣತ್ಯಾಗ ಮಾಡಲಿಕ್ಕೆ ಬೋಧಿ ಸಿದ್ದರ ಪರಿಣಾಮವೇ ಇದಾಗಿದ್ದಿತು.

ಮರುದಿನ ಬೆಳಿಗ್ಗೆ ಶಶಿಮುಖಿಯು ಒಂದು ಬಿಳಿಯ ಕಾಗದವನ್ನೂ ಒಂದಾಣೆಯ ತಿಕೀಟನ್ನೂ ತನ್ನ ಗಂಡನ ಕೈಗಿತ್ತು, ಆದರಲ್ಲಿ ಏನೇನನ್ನೋ

ಬರೆಯಿಸಹತ್ತಿದಳು. ಮತ್ತ ತಲೆಯ ವಲ್ಲಭರಾಯನಿಗೆ ಆ ಬರೆವಣಿಗೆಯ ಇಂಗಿತವು ತಿಳಿಯುವ ಬಗೆ ಹೇಗೆ? ಅದರಿಂದ ಅವನು ಆ ಬರೆವಣಿಗೆಯನ್ನು ನಡುವೇ ನಿಲ್ಲಿಸಿ:—"ಈ ಬರೆವಣಿಗೆಯ ಪ್ರಯೋಜನವೇನು?" ಎಂದನು.

ಶಶಿಮುಖಿಯು ಅವನಿಗೆ ಚೆನ್ನಾಗಿ ಛೀ ಹಾಕಿ:—"ನಿಮಗಷ್ಟೊಂದು ಬುದ್ಧಿಯಿದ್ದರೆ ನನ್ನ ಗತಿಯು ಹೀಗೇಕಾಗುತ್ತಿದ್ದಿತು? ಹಿಂದಕ್ಕೆ ನಾನು ಹೇಳಿದಂತೆ ಕೇಳದೆ, ನಿಮ್ಮ ಅಹಂಭಾವವನ್ನು ತೋರಿ ನಡೆದ ಪರಿಣಾಮವನ್ನೇ ನಾವೀಗ ಅನುಭೋಗಿಸುತ್ತಿರುವೆವು. ಇನ್ನು ನಾನು ನಿಮ್ಮ ಬುದ್ಧಿವಂತಿಕೆಗೆ ಸ್ವಲ್ಪವೂ ಬೆಲೆ ಕೊಡುವದಿಲ್ಲ. ನಾನು ಹೇಳುವಂತೆ ಸುಮ್ಮನೆ ಈ ಕಾಗದವನ್ನು ಬರೆದು ಮುಗಿಸಿರಿ, ಅಂದರಾಯಿತು" ಎಂದು ಗದ್ದರಿಸಿದಳು.

ಬಳಿಕ ವಲ್ಲಭರಾಯನು ನಡುವೆ ಯಾವ ಪ್ರಶ್ನೆಯನ್ನೂ ಮಾಡದೆ, ಆಗಲೆ ಶಾಲೆಗೆ ಹೋಗಹತ್ತಿದ ಎಳೆಮಗುವು, ಅಯ್ಯನವರು ಒತ್ತಿ ಒತ್ತಿ ಹೇಳುವ ಶುದ್ಧಲೇಖನವನ್ನು ಶುದ್ಧಾಶುದ್ಧಗಳ ಪರಿವೆಯಿಲ್ಲದೆ ಹೇಗೆ ಒಮ್ಮನಸ್ಸಿನಿಂದ ಬರೆಯುವದೋ, ಹಾಗೆ ಹೆಂಡತಿಯು ಹೇಳಿದ ಸಂಗತಿಗಳನ್ನೆಲ್ಲ ಆ ಕಾಗದದಲ್ಲಿ ಬರೆದುಬಿಟ್ಟನು. ಬರೆಯುವದಾದ ಮೇಲೆ ಸ್ವತಃ ಶಶಿಮುಖಿಯೇ ಆ ಪತ್ರವನ್ನು ಓದಿ ನೋಡಿದಳು; ಹಾಗು ತನ್ನಷ್ಟಕ್ಕೆ ತಾನೆ ತನ್ನ ಬುದ್ಧಿವಂತಿಕೆಯ ಬಗ್ಗೆ ತಲೆಯನ್ನಲ್ಲಾಡಿಸಿದಳು! ಬುದ್ಧಿಗೇಡಿಯಾದ ವಲ್ಲಭನಿಗೆ ಆ ಪತ್ರದ ಹೊಯಿಲೇ ಗೊತ್ತಾಗಲಿಲ್ಲ. ಅದರಿಂದ ಅವನು ಪಿಟ್ಟೆಂದುಸುರದೆ ಸುಮ್ಮನೆ ಕುಳಿತನು. ಅಂದೇ ಮಧ್ಯಾಹ್ನ ಕಾಲದಲ್ಲಿ ಆ ಕಾಗದವನ್ನು ಕೈಯಲ್ಲಿ ಹಿಡಿದುಕೊಂಡ ಶಶಿಮುಖಿಯು ಶಾರದೆಯ ಬಳಿಗೆ ಬಂದು:-"ತಂಗೀ ಶಾರಕ್ಕಾ, ಈ ಕಾಗದದ ಕೆಳಗಿನ ತಿಕೇಟು ಹಚ್ಚಿದ ಸ್ಥಳದಲ್ಲಿ ನಿನ್ನ ಸಹಿಯನ್ನಷ್ಟು ಮಾಡು ನೋಡೋಣ" ಎಂದಂದಳು.

ಆ ಕಾಗದವನ್ನು ಕೈಯಲ್ಲಿ ಹಿಡಿದುಕೊಂಡು ಶಾರದೆಯು ಶಶಿಮುಖಿಯ ಮೋರೆಯನ್ನು ಟಕಮಕವಾಗಿ ನೋಡುತ್ತ:—"ಅತ್ತೆಯವರೇ, ಇದಕ್ಕೆ ನನ್ನ ಸಹಿಯ ಆವಶ್ಯಕತೆಯೇನು?"

"ತಂಗೀ, ನಾನು ಹೇಳಿದಂತೆ ಸಹಿ ಮಾಡಬಾರದೆ? ಹೆಚ್ಚಿನ ಗೊಡವೆ ನಿನಗೇಕೆ?"

ಆದರೂ ಶಾರದೆಯು ಸುಮ್ಮನೆ ನಿಂತುಕೊಂಡಳು. ಅದನ್ನು ತಡೆಯಲಾರದೆ ಶಶಿಮುಖಿಯು:—"ಇನ್ನು ನೀನು ಎಲ್ಲಿ ವಾಸವಾಗಿರುವೆ? ಈ ಮನೆಯಲ್ಲಂತೂ ನೀನಿರಲಾರೆ. ನಾನು ನಿನ್ನ ಕಲ್ಯಾಣಕ್ಕಾಗಿಯೇ ಈ ಕಾಗದವನ್ನು ಬರೆಯಿಸಿರುವೆನು. ಇದಕ್ಕೆ ನೀನು ಸಹಿ ಮಾಡಿದೆಯೆಂದರೆ, ನಿನಗೆ

ತಿಂಗ-ತಿಂಗಳಿಗೆ ಐದು ರೂಪಾಯಿಗಳಂತೆ ನೀನಿದ್ದಲ್ಲಿಗೆ ಪೋಟಿಗಿಯ ಹಣವನ್ನು ತಪ್ಪದೆ ಕಳಿಸಿಕೊಡುವೆನು. ಇದೇನು ಕೆಡಕೆ? ಈ ಬಗ್ಗೆ ಹೆಚ್ಚಿಗೆ ಪೃಚ್ಛಾಪೃಚ್ಛ ಮಾಡುವದರಲ್ಲಿ ಅರ್ಥವಿಲ್ಲ" ಎಂದು ಗದ್ದರಿಸಿದಳು.

ತನ್ನ ಒಳಿತು-ಕೆಡಕುಗಳ ಜ್ಞಾನವು ಶಶಿಮುಖಿಗಿಂತಲೂ ಶಾರದೆಗೆ ಚೆನ್ನಾಗಿತ್ತು; ಅಲ್ಲದೆ, ಆ ಹಿತಕಾಂಕ್ಷಿಣಿಯಾದ ಶಶಿಮುಖಿಯ ಹೃದಯವು ತನ್ನ ವಿಷಯಕ್ಕೆ ಎಷ್ಟು ಕಲುಷಿತವಾಗಿರುವದೆಂಬದೂ ಅವಳಿಗೆ ಚೆನ್ನಾಗಿ ಗೊತ್ತಿತ್ತು. ತನ್ನ ಸರ್ವಸ್ವವೇ ನಾಶವಾಗಿರುವಾಗ ಆ ದುಷ್ಟ ಶಶಿಮುಖಿಯೊಡನೆ ವಾದಿಸಾಡುವ ಇಚ್ಛೆಯು ಅವಳಿಗಿರಲಿಲ್ಲ. ಆಗಿನ ಕಾಲದ ಶಶಿಮುಖಿಯ ದೃಷ್ಟಿಯಿನ್ನು ನೋಡಿದವರಿಗೆ ಅವಳು ಸರ್ವ ಬಗೆಯಿಂದಲೂ ಶಾರದೆಯನ್ನು ದ್ವೇಷಿಸುತ್ತಿರುವಳೆಂಬದು ತಟ್ಟನೆ ಹೊಳೆಯುವಂತಿತ್ತು. ಶಾರದೆಯು ವಿಚಾರಮಗ್ನಳಾಗಿ ನಿಂತಿರಲು, ಶಶಿಮುಖಿಯು ಸೆರಗಿನಿಂದ ತನ್ನ ಕಣ್ಣುಗಳನ್ನೊರೆಸಿಕೊಳ್ಳುತ್ತ :—"ತಂಗೀ, ಶಾರಕ್ಕಾ........" ಎಂದಂದು, ಒಳ್ಳೇ ಹಗಣದಿಂದ ಅಳತೊಡಗಿದಳು.

"ಅತ್ತೆಯವರೇ, ನೀವಿನ್ನು ಕಣ್ಣೀರು ಸುರಿಸಬೇಡಿರಿ. ಇಗೋ, ನಾಸಿದಕ್ಕೆ ಸಹಿ ಮಾಡುವೆನು" ಎಂದವಳೇ, ಶಾರದೆಯು ದೌತಿ-ಲೆಕ್ಕಣಿಕೆಗಳನ್ನು ತಕ್ಕೊಂಡು, ಆ ತಿಕೀಟು ಹಚ್ಚಿದ ಕಾಗದದ ಮೇಲೆ ಸಹಿ ಮಾಡಿಬಿಟ್ಟಳು.

ಇಂದು ಆಶ್ವಿಜ ಶುದ್ಧ ಬಿದಿಗೆಯು; ಶಾರದೆಯು ಇಂದೇ ಆ ತನ್ನ ಸ್ವಂತದ ಮನೆಯಿಂದ ಹೊರಹೊರಡತಕ್ಕ ದಿನವಾಗಿದ್ದಿತು. ಅಂದು ಬೆಳಗಿನಿಂದ ಮಳೆಯು ಒಂದೇ ಸವನೆ ಧಾರೆಗಟ್ಟಿ ಸುರಿಯಹತ್ತಿತ್ತು. ಆದರಿಂದ ಶಾರದೆಯನ್ನು ಇಂದು ಹೊರಗೆ ಹಾಕಲಿಕ್ಕೆ ಆಗುವದೋ-ಇಲ್ಲವೋ ಎಂಬ ಶಂಕೆಯಿಂದ ಶಶಿಮುಖಿಯ ಮನಸ್ಸು ಒಂದೇಸವನೆ ಕುದಿಯಹತ್ತಿತ್ತು.

ಆ ಇಡಿ ದಿನದಲ್ಲಿ ಶಾರದೆಯು ತನ್ನ ಮನೆಯ ಸಾಮಾನುಗಳನ್ನೆಲ್ಲ ವ್ಯವಸ್ಥೆಗೊಳಿಸುವದರಲ್ಲಿ ತೊಡಗಿದ್ದಳು. ಬೆಲೆಯುಳ್ಳ ವಸ್ತ್ರ-ಪ್ರಾವರಣಗಳನ್ನು ಚೆನ್ನಾಗಿ ಕೊಡವಿ, ಗಂಟು ಕಟ್ಟಿ, ಕಪಾಟುಗಳಲ್ಲಿ ತುಂಬಿಟ್ಟಳು. ವಸ್ತ-ಒಡವೆಗಳನ್ನೆಲ್ಲ ಟ್ರಂಕು-ತಿಜೋರಿಗಳಲ್ಲಿ ತುಂಬಿದಳು. ನಂತರ ತನ್ನ ಗಂಡನನ್ನು ತನ್ನಲ್ಲಿಗೆ ಕರೆಯಲಿಕ್ಕೆಂದು ದಾಸ-ದಾಸಿಯರನ್ನು ಕಳಿಸಿದಳು. ಚಂದ್ರಕಾಂತನು ಬರಲಿಕ್ಕೆ ತುಸ ತಡವಾಗಲು, ತನ್ನ ದುಃಖವನ್ನು ತಡೆಯಲಾರದ ಶಾರದೆಯು, ಬಿದ್ದುಬಿದ್ದು ಅತ್ತಳು. ತಾನು ಆ ಮನೆಯಿಂದ ಹೊರಡುವ ಕ್ಷಣವು ಎಷ್ಟು ಸಮೀಪಿಸಹತ್ತಿತೋ, ಶಾರದೆಗೆ ದುಃಖದ ಆವೇಗಗಳು ಅಷ್ಟು ಭರದಿಂದ ಬರತೊಡಗಿದವು. ಕಳೆದ ಏಳೆಂಟು ದಿನಗಳನ್ನು ಅವಳು

ಯಾವ ಧೈರ್ಯದಿಂದ ಆ ಮನೆಯಲ್ಲಿ ಕಳೆದಿದ್ದಳೋ, ಆ ಬಗೆಯ ಧೈರ್ಯವು ಇಂದು ಅವಳಲ್ಲುಳಿದಿರಲಿಲ್ಲ. ತಾನು ಈ ಮನೆಯಿಂದ ಸಹಜವಾಗಿ ಹೊರ ಬೀಳದಿದ್ದರೆ, ಹೊಡೆಸಿ-ಬಡಿಸಿಕೊಂಡು ಬಡ ಭಿಕ್ಷುಕರಂತೆ ಎಲ್ಲಿ ಹೊರಗೆ ಹಾಕಿಸಿಕೊಳ್ಳುವ ಪ್ರಸಂಗ ಬರುವದೋ? ಎಂದು ಅವಳು ಸಾಶಂಕಮನಸ್ಕ ಳಾದಳು. ಅಂಥ ಆ ನಿರ್ವಾಣದ ಸ್ಥಿತಿಯಲ್ಲೂ ಅವಳು ತನ್ನ ಆತ್ಮಸನ್ಮಾನ ವನ್ನು ಎಳ್ಳಷ್ಟೂ ಕೂಡ ಕಳಕೊಳ್ಳಲಿಕ್ಕೆ ಮನಸ್ಸು ಮಾಡಲಿಲ್ಲ.

ಅಷ್ಟರಲ್ಲಿ ಚಂದ್ರಕಾಂತನು ಆ ಕೋಣೆಗೆ ಬರಲು, ಅವಳು ತನ್ನ ಕಣ್ಣು ಗಳನ್ನು ಒರೆಸಿಕೊಳ್ಳುತ್ತ ಎದ್ದು ನಿಂತಳು; ಹಾಗು ಒಳ್ಳೇ ಸನ್ಮಾನದಿಂದ:— "ಬನ್ನಿರಿ, ಪ್ರಾಣಮೊಡೆಯರೇ! ಬನ್ನಿರಿ; ಈ ದಾಸಿಯು ಈ ಮನೆಯಿಂದ ಹೊರಹೊರಡುವ ದಿನವಿದಾಗಿಲ್ಲವೇ?" ಎಂದು ನುಡಿದಳು. ಆಗಲೂ ಅವಳ ಕಣ್ಣೊಳಗಿಂದ ನೀರು ಧಾರೆಗಟ್ಟಿ ಹರಿಯುತ್ತಿರುವದನ್ನು ಕಂಡು, ಚಂದ್ರ ಕಾಂತನು ಬೇರೆ ಕಡೆಗೆ ಮೋರೆ ತಿರುವಿ ಕುಳಿತನು. ಬಳಿಕ ಶಾರದೆಯು ಅವನ ಸಮೀಪಕ್ಕೆ ಹೋಗಿ:—"ಈ ಬೀಗದ ಕೈಗಳ ಸರವನ್ನು ತಕ್ಕೊಳ್ಳಿರಿ. ಎಲ್ಲಿಯ ವರೆಗೆ ನೀವು ಪುನಃ ಲಗ್ನವಾಗಲಾರಿರೋ, ಅಲ್ಲಿಯ ವರೆಗೂ ನೀವು ಇದನ್ನು ಬೇರೆ ಯಾರ ಕೈಗೂ ಕೊಡಬೇಡಿರಿ" ಎಂದಂದಳು.

ಚಂದ್ರಕಾಂತನು ಒತ್ತಿ ಬಂದ ಕಂಠದಿಂದ:—"ಶಾರದೇ, ಈ ಸರವು ಇದುವರೆಗೆ ಎಲ್ಲಿರುತ್ತಿತ್ತೋ, ಈಗಲೂ ಇದನ್ನು ಅಲ್ಲಿಯೇ ಇರಿಸಿಬಿಡು."

ಶಾರದೆಯು ಚಂದ್ರಕಾಂತನನ್ನು ಬಿಗಿದಪ್ಪಿ, ಅವನ ಮುಖವನ್ನು ತನ್ನ ಕಡೆಗೆ ತಿರುವಿಕೊಂಡು, ನಗೆಮೊಗದಿಂದ:—"ಇಂದು ನೀವು ದುಃಖದಿಂದ ಅಳುವ ಹಾಗೆ ಕಾಣುತ್ತದಲ್ಲ?"

ಆಗ ಚಂದ್ರಕಾಂತನು ಯಾವ ಧೈರ್ಯದಿಂದ ಮಾತಾಡುವನು? ಅವನು ಸ್ತಬ್ಧನಾದುದನ್ನು ಕಂಡು ಶಾರದೆಯು ಆತನ ಕಣ್ಣುಗಳನ್ನೊರೆಸುತ್ತ: "ಪ್ರಾಣನಾಥ, ನಾನು ಇದುವರೆಗೆ ತಮ್ಮನ್ನೆಂದೂ ಪರಿಹಾಸ ಮಾಡಿದವಳಲ್ಲ. ಆದರೂ ಈ ಕಟ್ಟಕಡೆಯ ದಿನದಲ್ಲಿ ನಾನು ತಮಗೆ ತಮಾಷೆ ಮಾಡಿದೆನು. ಈ ಬಗ್ಗೆ ಸಿಟ್ಟಾಗದೆ, ಈ ದಾಸಿಯನ್ನು ಕ್ಷಮಿಸಿರಿ" ಎಂದಂದು, ಮತ್ತೆ:— "ನಾಥಾ, ನನ್ನ ಕಡೆಗಿದ್ದ ನಿಮ್ಮ ಬೆಲೆಯುಳ್ಳ ಬಟ್ಟೆ-ಬರೆ, ವಸ್ತ್ರ-ಒಡವೆಗಳ ನ್ನೆಲ್ಲ ನಿಮ್ಮ ಕಪಾಟು-ಟ್ರಂಕು-ತಿಜೋರಿಗಳಲ್ಲಿ ಶೇಖರಿಸಿಟ್ಟಿರುತ್ತೇನೆ. ಆ ಜೀನಸುಗಳು ನಡುವೇ ಮಾಯವಾಗದಂತೆ ಚೆನ್ನಾಗಿ ನೋಡಿಕೊಳ್ಳುತ್ತಿರಿ."

ಆಗ ಚಂದ್ರಕಾಂತನು ಶಾರದೆಯನ್ನು ದಿಟ್ಟಿಸಿ ನೋಡತೊಡಗಿದನು. ಅವಳು ಆಗ ನಿರಾಭರಣಳಾಗಿದ್ದಳು. ಅವಳ ಕೈಯಲ್ಲಿ ಬರಿಯ ನಾಲ್ಕಾರು

ಗಾಜಿನ ಬಳೆಗಳು ಮಾತ್ರ ಒಪ್ಪುತ್ತಿದ್ದವು. ಶಾರದೆಯ ಆ ನಿರಾಲಂಕಾರ ಯುಕ್ತ ಮೂರ್ತಿಯು ಚಂದ್ರಕಾಂತನ ದೃಷ್ಟಿಗೆ ಶೂಲಿಯನ್ನುಂಟು ಮಾಡಿತು; ಆದರೆ ಹಾಗೇಕಾಯಿತೆಂಬದು ಮಾತ್ರ ಅವನಿಗೆ ತಿಳಿದು ಬರಲಿಲ್ಲ. ಆದರೂ "ಇಂದು ಒಂದೆರಡು ಆಭರಣಗಳನ್ನಾದರೂ ಮೈಮೇಲಿಟ್ಟುಕೊಂಡು ಹೋಗ ಬೇಕೆ"ಂದು ಅವನು ಆಕೆಗೆ ಬಾಯಿಬಿಟ್ಟು ಹೇಳದಾದನು. ಅಲಂಕಾರ ಯುಕ್ತ ಶಾರದೆಗಿಂತ ನಿರಾಲಂಕಾರ ಶಾರದೆಯೇ ಅಂದು ಅವನಿಗೊಳ್ಳೇ ಸುಂದರಳಾಗಿ ತೋರಿದಳು. ಬಳಿಕ ಶಾರದೆಯು ಚಂದ್ರಕಾಂತನ ಪದದ್ವಯ ಗಳನ್ನು ವಂದಿಸಿ:—'ಕಾಂತಾ, ನಾನಿನ್ನು ತೆರಳುವೆನು. ನಿರರ್ಥಕವಾಗಿ ದುಃಖಿಸಬೇಡಿರಿ. ನನ್ನನ್ನು ಹೊರದೂಡುವ ಈ ನೀಚ ಕೃತಿಯಲ್ಲಿ ನಿಮ್ಮ ಅಪರಾಧವು ಲವಲೇಶವೂ ಇರುವದಿಲ್ಲೆಂಬದನ್ನು ನಾನು ಚೆನ್ನಾಗಿ ಬಲ್ಲೆನು." ಎನ್ನಲು, ಇದುವರೆಗೆ ಹೇಗಾದರೂ ತನ್ನ ದುಃಖವನ್ನು ಹತ್ತೊತ್ತಿಕೊಂಡು ನಿಂತಿದ್ದ ಚಂದ್ರಕಾಂತನಿಗೆ ಇನ್ನು ಅದೇ ಸ್ಥಿತಿಯಲ್ಲಿ ನಿಲ್ಲುವದು ಅಶಕ್ಯವೆನಿ ಸಲು, ಅವನು ಶಾರದೆಯ ಬಳಿಯಿಂದ ಬೇರೆ ಕಡೆಗೆ ಹೊರಟು ಹೋದನು.

ಶಾರದೆಯು ಹೊರಡತಕ್ಕ ಗಾಡಿಯು ಆ ಊರಿಂದ ಸಂಜೆಯ ಮೊದಲೇ ಹೊರಡುತ್ತಿತ್ತು. ಆದರಿಂದ ಬೇಗನೆ ಸ್ಟೇಶನ್ನಿಗೆ ಹೊರಡಬೇಕಾಗಿತ್ತು. ಮಳೆ ಯಂತೂ ಧಾರೆಗಟ್ಟಿ ಸುರಿಯುತ್ತಲೇ ಇತ್ತು. ಚಂದ್ರಕಾಂತನ ಮನೆಯ ಮುಖ್ಯ ಕಾರಭಾರಿಯು ಕಂಬಳಿ-ಕೊಡೆಗಳನ್ನು ಹಿಡಿದುಕೊಂಡು ಹೇಗಾದ ರೊಮ್ಮೆ ಗಾಡಿವಾನನ ಪಕ್ಕಕ್ಕೆ ಹೋಗಿ ಕುಳಿತುಕೊಂಡನು. ಶ್ರೀ ರಾಘ ವನು ಲೋಕಾಪವಾದಕ್ಕಾಗಿ ಲೋಕಮಾತೆಯಾದ ಸೀತಾದೇವಿಯನ್ನು ತ್ಯಜಿಸಿ ಅರಣ್ಯಕ್ಕೆ ಬಿಟ್ಟು ಬರಬೇಕೆಂದು ಲಕ್ಷ್ಮಣನಿಗೆ ಆಜ್ಞಾಪಿಸಲು, ಆಗ ಆತನು ನೊಂದ ಮನಸ್ಸಿನಿಂದ ಹೇಗೆ ಆ ವಿಧಿಯನ್ನು ನೆರವೇರಿಸಿದ್ದನೋ, ಅದೇ ಬಗೆಯಿಂದ ಚಂದ್ರಕಾಂತನ ಮನೆಯ ಆ ಮುಖ್ಯ ಕಾರಭಾರಿಯೂ ಹಳಹಳಿಸುವ ಮನಸ್ಸಿನಿಂದ ಮಾಡಿದನು

ಹೊರಡುವಾಗ ಶಾರದೆಯು ಶಶಿಮುಖಿಯ ಮನಸ್ಸಿನ ಹರ್ಷವನ್ನು ತಿಳಿದೂ ತಿಳಿದು, ಅವಳಿಗೆ ನಮಸ್ಕಾರ ಮಾಡಿ:—"ಅತ್ತೆಯವರೇ, ಮನೆ ಯೊಳಗಿನ ಬೆಲೆಯುಳ್ಳ ಜೀನಸುಗಳ, ಕಪಾಟು-ತಿಜೋರಿಗಳ ಕಡೆಗಿಷ್ಟು ದೃಷ್ಟಿಯಿರಲಿ" ಎಂದಳು. "ಬಿಡು-ಬಿಡು, ಆ ಚಿಂತೆಯನ್ನು ಬಿಟ್ಟು ಬಿಡು." ಎಂದು ಶಶಿಮುಖಿಯು ಒಳ್ಳೇ ಆಢ್ಯತೆಯಿಂದ ನುಡಿದಳು. ಹಾಗೆ ನುಡಿಯು ವಾಗ ಆ ಕಪಾಟು-ತಿಜೋರಿ-ಟ್ರಂಕುಗಳಲ್ಲಿ ತುಂಬಿರುವ ಬೆಲೆಯುಳ್ಳ ಪದಾ ರ್ಥಗಳೆಲ್ಲ ಯಾವಾಗ ತನ್ನ ಕೈವಾಡಾಗುವವೋ ಎಂದು ಶಶಿಮುಖಿಯು

ದುರಾಲೋಚಿಸಲಾರಂಭಿಸಿದಳು. ವಾಚಕರೇ, ಲೋಭವನ್ನು ಆವರಿಸಿಕೊಳ್ಳುವದು ಎಂತೆಂತಹ ಯೋಗಿಗಳಿಗೂ ಅಶಕ್ಯವಾಗಿರಲು, ಶಶಿಮುಖಿಯಂಥ ಹೀನಲೋಭಿಗೆ ಸಾಧ್ಯವೇ? ಶಶಿಮುಖಿಯು ಅಷ್ಟಕ್ಕೇ ಸುಮ್ಮನಾಗದೆ, ಶಾರದೆಯು ತನ್ನೊಡನೆ ಏನೇನು ಒಯ್ಯುವಳೋ ಎಂಬುದನ್ನು ನೋಡುವ ಕುತೂಹಲದಿಂದ ಶಾರದೆಯು ತನ್ನೊಡನೆ ತಕ್ಕೊಂಡಿದ್ದ ಒಂದು ಮುರುಕ ತಗಡಿನ ಡಬ್ಬಿಯ ಮುಚ್ಚಳವನ್ನು ಭರ್ರನೆ ತೆರೆದು, ಅದರಲ್ಲಿ ತನ್ನ ಕಾಕ ದೃಷ್ಟಿಯನ್ನು ಚಲ್ಲಿದಳು. ಆ ಪೆಟ್ಟಿಗೆಯಲ್ಲಿ ಹೆಚ್ಚಿನ ಜೀನಸುಗಳೇನೂ ಇರಲಿಲ್ಲ. ಒಂದೆರಡು ಹಳೆಯ ಮಡಿಸೀರೆಗಳು, ಭಗವದ್ಗೀತೆ ಮೊದಲಾದ ಒಂದೆರಡು ಪುಸ್ತಕಗಳು, ಕಾಗದವಲ್ಲಿ ಸುತ್ತಿದ್ದ ಒಂದೆರಡು ಫೋಟೋ ಮುಂ-ತಾದ ಕೆಲ ಸಾಮಾನ್ಯ ವಸ್ತುಗಳೇ ಕಂಡವು.

ಶಶಿಮುಖಿಯ ಭಾವವನ್ನು ತಿಳಿದ ಶಾರದೆಯು ಗಂಭೀರಭಾವದಿಂದ: "ಅತ್ತೆಯವರೇ, ಇದಕ್ಕೂ ಹೆಚ್ಚಿನ ವಸ್ತುಗಳಿಂದ ನನಗೇನು ಪ್ರಯೋಜನ?" ಎನ್ನಲು, ಶಶಿಮುಖಿಯು ಸಿಟ್ಟಿಂದುಸುರದೆ, ಅಲ್ಲಿಂದ ಬೇರೆ ಕಡೆಗೆ ಹೊರಟು ಹೋದಳು.

ಶಾರದೆಯು ಗಾಡಿಯನ್ನೇರಿ ಕೂಡ್ರಲು ಗಾಡಿಯವನು ಗಾಡಿಯನ್ನು ಭರದಿಂದ ಬಿಟ್ಟನು. ಆ ದೃಶ್ಯವು ಎದುರಿಗಿನ ಮನೆಯ ಅಟ್ಟದ ಮೇಲಿನ ಮಾರ್ತಂಡರಾಯನಿಗೆ ಗೋಚರವಾಯಿತು. ಆಗ ಆತನ ಬಾಯಿಂದ:— "ಆದದ್ದೇನೂ ಒಳಿತಾಗಲಿಲ್ಲ." ಎಂಬ ಅಸ್ಫುಟ ವಾಕ್ಯವು ತಟ್ಟನೆ ಹೊರಬಿದ್ದು ಹೋಯಿತು.

೦ ೦ ೦ ೦ ೦

ಅಂದು ಇಡಿ ರಾತ್ರಿಯಲ್ಲಿ ಮಾರ್ತಂಡರಾಯನಿಗೆ ಒಂದಿಷ್ಟೂ ನಿದ್ದೆ ಹತ್ತಲಿಲ್ಲ. ಆ ಇಡಿ ರಾತ್ರಿಯಲ್ಲೆಲ್ಲ ಅವನ ಎರಡೂ ಕಿವಿಗಳಲ್ಲಿ ಒಂದು ಬಗೆಯ ಘೋರವಾದ ನಾದವು ಘುಮುಘುಮಿಸುತ್ತಿತ್ತು. ಅವನು ದೊಡ್ಡ ನಸುಕಿನಲ್ಲಿಯೇ ಹಾಸುಗೆಬಿಟ್ಟೆದ್ದು ಹೊರಗೆ ಬಂದನು. ಮನೆಯ ಹೊರಗೆ ಬಂದು ನೋಡುತ್ತಾನೆ, ತಲೆಬಾಗಿಲ ಬಳಿಯಲ್ಲಿ ಒಬ್ಬ ಅಪರಿಚಿತ ಮನುಷ್ಯನು ದೀನವೇಷದಿಂದ ಅರ್ಧಸುಷುಪ್ತಾವಸ್ಥೆಯಲ್ಲಿ ಕುಳಿತಿರುವನು! ಮಾರ್ತಂಡರಾಯನು ಆತನ ಹತ್ತಿರಕ್ಕೆ ಹೋಗಲು, ಆ ವ್ಯಕ್ತಿಯು ತಟ್ಟನೆ ಎದ್ದು ನಿಂತು: "ರಾಯರೇ, ನಾನೊಬ್ಬ ದಾರಿಕಾರನು" ಎಂದು ಹೇಳಲು, ಮಾರ್ತಂಡರಾಯನು ಅಲ್ಲಿಂದ ಪುನಃ ಮನೆಯೊಳಕ್ಕೆ ಹೊರಡಲನುವಾದನು. ಆಗ ಆ ವ್ಯಕ್ತಿಯು ಹಿಂದಿನಿಂದಲೇ ಬಂದು:—"ಮಾರ್ತಂಡರಾಯರ ಮನೆಯು ಇದೇ ಏನು?" ಎಂದು ಕೇಳಿದನು.

ಮಾರ್ತಂಡರಾಯನು ಆ ಆಗಂತುಕನ ಕಡೆಗೆ ಮತ್ತೆ ನೋರೆದಿರುವಿ ನಿಂತು.—"ಅಹುದು; ಇವೇ ಅದು."

"ನನಗೆ ಮಾರ್ತಂಡರಾಯರ ಭೆಟ್ಟಿಯು ಯಾವಾಗ ಆದೀತೆಂಬದನ್ನು ಹೇಳಬಲ್ಲಿರಾ?"

"ನಾನೇ ಮಾರ್ತಂಡರಾಯನು."

ಆಗ ಆ ಆಗಂತುಕನು ಅತಿ ಹರ್ಷದಿಂದ ಮಾರ್ತಂಡರಾಯನನ್ನು ವಂದಿಸಿ:—"ರಾಯರೇ, ನಾನು ತಮ್ಮ ಕಡೆಗೇ ಬಂದಿರುತ್ತೇನೆ."

ಮಾರ್ತಂಡರಾಯನು ಅವನನ್ನು ಆಪಾದ-ಮಸ್ತಕಪರ್ಯಂತವಾಗಿ ಚೆನ್ನಾಗಿ ನಿರೀಕ್ಷಿಸಿ:—"ನೀನು ಕಾಶಿಯಿಂದ ಬಂದಿರುವಿಯಲ್ಲವೇ?"

"ಹೌದು. ತಮ್ಮ ತರ್ಕವು ಯಥಾರ್ಥವಾದುದು."

"ನಿನ್ನನ್ನು ಹರಭಟ್ಟನೇ ಕಳಿಸಿರುವನೇನು?"

"ಅದೂ ನಿಜವು."

"ದುಡ್ಡಿಗಾಗಿ ಬಂದಿರಬಹುದಲ್ಲವೆ?"

"ನಿಶ್ಚಯ-ನಿಶ್ಚಯ!"

ಮಾರ್ತಂಡರಾಯನು ಮುಗುಳ್ನಗೆ ನಗುತ್ತ:-"ಅದಕ್ಕಾಗಿ ನನ್ನ ಕಡೆಗೇಕೆ ಬಂದೆ? ನಾನು ದುಡ್ಡು ಕೊಡುವೆನೆಂಬದು ನಿನಗೆ ತಿಳಿದುದಾದರೂ ಹೇಗೆ?"

ಆಗಂತುಕನು ಗೋಣು ಅಲ್ಲಾಡಿಸುತ್ತ:—"ಹರಭಟ್ಟನು 'ನೀವೇ ಹಣ ಕೊಡುವಿರಿ; ಇಲ್ಲವೆ ಅದನ್ನು ಕೊಡಿಸುವಿರಿ' ಎಂದು ಹೇಳಿ ಕಳಿಸಿರುವರು."

ಮಾರ್ತಂಡರಾಯನು ಹುಬ್ಬು ಗಂಟಿಕ್ಕಿ:—"ಹೀಗಲ್ಲವೆ? ಹಾಗಾದರೆ ಒಳಗೆ ಬಾ" ಎಂದನು. ಕೂಡಲೆ ಇಬ್ಬರೂ ಒಂದು ನಿರ್ಜನವಾದ ಕೋಣೆಯನ್ನು ಪ್ರವೇಶಿಸಿದರು. ಬಳಿಕ ಮಾರ್ತಂಡರಾಯನು:—"ನೀನು ಹೇಳಿದುದೆಲ್ಲವೂ ನಿಜವೆ?"

"ಎಲ್ಲವೂ ನಿಜವು" ಹೀಗೆಂದು ನುಡಿದು, ಆ ಆಗಂತುಕನು ತನ್ನಲ್ಲಿಯ ಎಷ್ಟೋ ಕಾಗದ-ಚೀಟಿಗಳನ್ನು ತೆಗೆದು ಮಾರ್ತಂಡರಾಯನ ಕೈಗಿತ್ತನು. ಮಾರ್ತಂಡರಾಯನು ಅವುಗಳನ್ನೆಲ್ಲ ತಿರುತಿರುವಿ ಓದಿ ನೋಡಿ:—"ಇದರಲ್ಲಿ ಚಂದ್ರಕಾಂತನ ಹೆಂಡತಿಯಾದ ಶಾರದೆಯ ದೋಷವೇನು?"

"ಅವಳ ದೋಷವು ಪ್ರತ್ಯಕ್ಷವಾಗಿರದಿದ್ದರೂ, ತಾಯಿಯ ದೋಷಕ್ಕಾಗಿ ಮಗಳು ದೋಷಿತಳಾಗುವದಿಲ್ಲವೆ?"

"ಹಾಗಾದರೆ ಯಾವಳು ನಿಜವಾಗಿ ದೋಷಿಯಾಗಿಲ್ಲವೋ, ಅವಳನ್ನು ಸುಮ್ಮಸುಮ್ಮನೆ ಸಂಕಟಕ್ಕೇಕೆ ಈಡು ಮಾಡಿದೆ?"

"ನಾನಾದರೂ ಏನು ಮಾಡಲಿ? ದುಡ್ಡಿಗಾಗಿ ಇವೆಲ್ಲವನ್ನೂ ಮಾಡ ಬೇಕಾಯಿತು!"

ಮಾರ್ತಂಡರಾಯನು ಕೆಲ ಕ್ಷಣಗಳ ವರೆಗೆ ಆಲೋಚಿಸಿ:-"ಈ ದುರ್ಲೌಕಿಕ ಸಂಗತಿಯನ್ನು ಕೇಳಿ ನನಗೂ ಬಲು ನಾಚಿಕೆಯೆನಿಸುತ್ತಿದೆ; ಯಾಕಂದರೆ ಚಂದ್ರಕಾಂತನು ನಮ್ಮಣ್ಣನ ಮಗನಲ್ಲವೆ?"

ಆಗ ಆ ವೈಶ್ಯರ ರಾಮಣ್ಣನು ತಲೆಯನ್ನಲ್ಲಾಡಿಸುತ್ತ ಒಳ್ಳೇ ನಿಶ್ಚಯ ಸೂಚಕ ದನಿಯಿಂದ:—"ನಾನಾದರೂ ಏನು ಮಾಡಲಿ? ನಿರುಪಾಯವಾಗಿದೆ!"

"ಆ ಮಾತು ನಿನ್ನನ್ನು ದಿಟ್ಟಿಸಿ ನೋಡುವ ಪ್ರತಿಯೊಬ್ಬನಿಗೂ ಚೆನ್ನಾಗಿ ಕಂಡುಬರುವಂತಿದೆ. ಅದಿರಲಿ. ನಾನೇ ದುಡ್ಡು ಕೊಡುವದಾದರೆ, ನಿನಗೆ ಎಷ್ಟು ರೂಪಾಯಿ ಕೊಡಬೇಕಾಗುವದು?"

"ಎರಡು ಸಾವಿರ."

"ಅವುಗಳನ್ನು ನಾನೇ ಕೊಡಬೇಕೋ?"

"ನೀವು ಕೊಟ್ಟರಂತೂ ವಿಹಿತವೇ. ಚಂದ್ರಕಾಂತನ ಬಳಿಗೆ ಹೋಗಿ ಶ್ರಮಪಡುವದಾದರೂ ಅದಾರಿಗೆ ಬೇಕಾಗಿದೆ?"

"ಹಣ ದೊರೆತೊಡನೆಯೇ ನೀನು ಈ ಊರ ಬಿಟ್ಟು ಸುಮ್ಮನೆ ಹೊರಟು ಹೋಗುವಿಯಾ? ಮತ್ತೆ ಯಾವ ಗೊಂದಲವನ್ನೂ ಎಬ್ಬಿಸಲಾರೆಯೆಂಬುದು ಖಂಡಿತವೇ?"

"ಖಂಡಿತ."

"ಹಾಗಾದರೆ ನೀನು ಅಪೇಕ್ಷಿಸುವ ಹಣವಾದರೂ ಎಷ್ಟು?"

"ತೀರ ಕಡಿಮೆಯೆಂದರೆ, ಎರಡು ಸಾವಿರಗಳಾದರೂ ಬೇಕು."

ಕೂಡಲೆ ಮಾರ್ತಂಡರಾಯನು ಆ ಕೋಣೆಯಿಂದ ಹೊರಬಿದ್ದು, ತನ್ನ ಮನೆಯ ಕಾರಭಾರಿಯಾಗಿದ್ದ ಲಕ್ಷ್ಮೀನಾರಾಯಣನನ್ನು ಕರೆದು, ಅವನ ಕಿವಿಯಲ್ಲಿ ಏನೇನೋ ಹೇಳಿದನು. ನಂತರ ತಾನು ಒಳಗೆ ಬಂದು, ಒಂದು ಸಾವಿರ ಬೆಲೆಯ ಎರಡು ಕರನ್ಸೀ ನೋಟುಗಳನ್ನು ತನ್ನ ಪೆಟ್ಟಿಗೆಯಿಂದ ಹೊರವೆಗೆದು, ಆ ವೈಶ್ಯರ ರಾಮಣ್ಣನ ಕೈಗಿತ್ತು:—"ಇಲ್ಲಿಂದ ಹತ್ತು ಹರದಾರಿಗಳ ಮೇಲಿರುವ ತಾಲೂಕ ಕಚೇರಿಗೆ ಹೋಗಿ, ಅಲ್ಲಿಯ ಖಜಾನೆಯಲ್ಲಿ ಇವುಗಳ ನಗದು ಹಣ ಪಡೆ. ಮತ್ತೆಲ್ಲಿಯೂ ಇವುಗಳನ್ನು ಮುರಿಸ ಹೋಗಬೇಡ. ನೀನು ಈ ಊರಿಗೆ ಮತ್ತೆ ಎಂದೂ ತಿರುಗಿ ಬರಬೇಡ. ನಾನು ನಿನಗೆ ಈ ಹಣವನ್ನು ಸಂತೋಷದಿಂದ ಕೊಟ್ಟಿಲ್ಲ. ಆದ್ದರಿಂದ ನೀನು ಮತ್ತೆ ಎಂದಾದರೂ ಇಲ್ಲಿಗೆ ಬಂದುದಾದರೆ, ನೀನು ಇಲ್ಲಿಂದ ಜೀವ ಸಹಿತ ಹೋಗಲಾರೆಯೆಂಬುದನ್ನು ಚೆನ್ನಾಗಿ ನೆನಪಿನಲ್ಲಿಡು."

ರಾಮಣ್ಣನು ಪಿಷ್ಟೆಂದುಸುರದೆ ಅಲ್ಲಿಂದ ಹೊರಟು ಹೋದನು; ಹಾಗು ಖಜಾನೆಯಿರುವ ಆ ತಾಲೂಕಿನ ಸ್ಥಳಕ್ಕೆ-ನಡುವಿನ ಹತ್ತು ಹರದಾರಿ ದಾರಿಯನ್ನು ಸತ್ತು-ಕೆಟ್ಟು ತುಳಿದು ಅಂದು ಸಂಜೆಯೊಳಗಾಗಿಯೇ-ಹೋಗಿ ತಲುಪಿದನು. ಕಚೇರಿಗೆ ತಲುಪುವಷ್ಟರಲ್ಲಿ ಸಂಜೆಯಾದ್ದರಿಂದ ಅಂದು ರಾಮಣ್ಣನಿಗೆ ಆ ದುಡ್ಡು ಸಿಗಲಿಲ್ಲ. ಮರುದಿನ ಮಧ್ಯಾಹ್ನ ಹೋಗಿ ರಾಮಣ್ಣನು ಖಜೀನದಾರನನ್ನು ಕಂಡು, ಸಾವಿರದ ಆ ಎರಡು ನೋಟುಗಳನ್ನು ಆತನ ಕೈಗಿತ್ತು ಹಣವೀಯಬೇಕೆಂದು ಕೇಳಿಕೊಂಡನು.

"ಖಜೀನದಾರನು ಆ ಎರಡೂ ನೋಟುಗಳನ್ನು ಹೊರಳಿಸಿ-ಹೊರಳಿಸಿ ನೋಡಿ:—"ಸ್ವಲ್ಪ ತಡೆ. ಈಗ ಹಣ ಕೊಡಿಸುವೆನು" ಎಂದಂದವನೇ ಪಕ್ಕದ ಕೋಣೆಗೆ ಹೋಗಿ, ಅಲ್ಲಿಯ ಪೋಲೀಸ ಅಮಲ್ದಾರನನ್ನು ಕರೆಕೊಂಡು ಬಂದನು; ಹಾಗು ರಾಮಣ್ಣನ ಕಡೆಗೆ ಬೊಟ್ಟು ಮಾಡಿ ತೋರಿಸಿ:—"ಈತನು ತಂದಿರುವ ಸಾವಿರದ ಈ ಎರಡು ನೋಟುಗಳೂ ಕಳವಿನವಾಗಿರುತ್ತವೆ. ಜಮೀನದಾರ ಮಾರ್ತಂಡರಾಯರ ಕಾರಭಾರಿಯು ತಮ್ಮ ಮನೆಯೊಳಗಿನ ಇಂಥ ಇಂಥ ನಂಬರಿನ ಸಾವಿರದ ಎರಡು ನೋಟುಗಳು ಕಳವಾಗಿರುತ್ತವೆಂದು ಈ ಕಚೇರಿಗೆ ಈ ಮೊದಲೇ ಬರೆಹ ಮೂಲಕ ಅರಿಕೆ ಮಾಡಿಕೊಂಡಿರುತ್ತಾನೆ. ಈತನು ಬಹುಶಃ ಭಿಕ್ಷುಕನ ವೇಷದಿಂದ ಅವರ ಮನೆಯನ್ನು ನುಗ್ಗಿ, ಈ ನೋಟುಗಳನ್ನು ಕದ್ದಿರುವದಾಗಿ ತೋರುತ್ತವೆ; ಯಾಕಂದರೆ, ಅವನು ಕೊಟ್ಟ ನಂಬರುಗಳೂ ಈ ನೋಟುಗಳ ನಂಬರುಗಳೂ ಒಂದೇ ಆಗಿರುತ್ತವೆ" ಎಂದು ಹೇಳಿದನು.

ಆಗ ರಾಮಣ್ಣನು ಹೇಳುತ್ತಾನೆ:—"ಜಮೀನದಾರ ಮಾರ್ತಂಡರಾಯರೇ ನನಗೀ ನೋಟುಗಳನ್ನು ಕೊಟ್ಟಿರುತ್ತಾರೆ."

"ಭಲೆ-ಭಲೆ! ಬಿಕ್ಕೆ ಬೇಡುವ ದರಿದ್ರನಿಗೆ ಯಾರಾದರೂ ಎರಡು ಸಾವಿರ ಬೆಲೆಯ ನೋಟುಗಳನ್ನು ಕೊಡುವುದುಂಟೇ? ಅದಿರಲಿ. ಪೋಲೀಸ ಅಮಲ್ದಾರರೇ, ಇವನನ್ನೀಗ ಕೈದು ಮಾಡಿರಿ. ಇವನು ತನ್ನ ಹೇಳಿಕೆಯನ್ನೆಲ್ಲ ಮ್ಯಾಜಿಸ್ಟ್ರೇಟರ ಎದುರಿಗೆ ಹೇಳಿಕೊಳ್ಳಲಿ."

ಕೂಡಲೆ ವೈಶ್ಯರ ರಾಮಣ್ಣನು ಕೈದು ಮಾಡಲ್ಪಟ್ಟನು; ಹಾಗು ಯಥಾ ಸಮಯಕ್ಕೆ ಮಾಜಿಸ್ಟ್ರೇಟರೆದುರಿಗೆ ನಿಲ್ಲಿಸಲ್ಪಟ್ಟನು. ಈ ಕೇಸಿಗಾಗಿ ಜಮೀನದಾರ ಮಾರ್ತಂಡರಾಯನಿಗೂ ಶಮನುಗಳಾಗಿದ್ದವು. ಅಂದು ಮಾರ್ತಂಡರಾಯನು ಮ್ಯಾಜಿಸ್ಟ್ರೇಟರೆದುರಿಗೆ ದೇವರಾಣೆ ಮಾಡಿ ಹೇಳಿದ್ದೇನಂದರೆ:—"ನಾನು ಈ ಭಿಕ್ಷುಕನನ್ನು ಇಹಜನ್ಮದಲ್ಲೆಂದೂ ಕಂಡವನಲ್ಲ.

ಈ ಎರಡು ಸಾವಿರ ಬೆಲೆಯು ನೋಟುಗಳು ನನ್ನವೇ ಆಗಿದ್ದು, ನನ್ನ ಪೆಟ್ಟಿಗೆಯೊಳಗಿಂದ ಆ ದಿನ ಕಳವಾಗಿವೆ. ಆ ಬಗ್ಗೆ ನಾನು ಈ ಮೊದಲೇ ಇಲ್ಲಿಯು ಹಾಗು ಎಲ್ಲ ಕಡೆಯು ಖಜೀನದಾರರುಗಳಿಗೆ ಬರೆಹ ಮೂಲಕ ಅರಿಕೆ ಮಾಡಿಕೊಂಡಿರುತ್ತೇನೆ.

ವೈಶ್ಯರ ರಾಮಣ್ಣನು ತನ್ನ ನಿರ್ದೋಷಿತನವನ್ನು ಹಲವು ಬಗೆಯಿಂದ ಹೇಳಹತ್ತಿದನು. ಮ್ಯಾಜಿಸ್ಟ್ರೇಟನು ಅವನ ಹೇಳಿಕೆಯಲ್ಲಿಯು ಕೆಲವಂಶವನ್ನು ಬರೆಕೊಂಡನು; ಆದರೆ ಮಾರ್ತಂಡರಾಯನ ಕಡೆಯು ವಕೀಲನ ಪ್ರಯತ್ನದ ಮೂಲಕ ರಾಮಣ್ಣನ ಮಿಕ್ಕ ಸಂಗತಿಗಳಾವವೂ ದಾಖಲಾಗಲಿಲ್ಲ. ಆದರಿಂದ ಮ್ಯಾಜಿಸ್ಟ್ರೇಟನು ಅವನನ್ನು ದೋಷಿಯೆಂದು ನಿರ್ಧರಿಸಿ, ಅವನಿಗೆ ಎರಡು ವರ್ಷಗಳ ಕಠಿಣ ಸಜವನ್ನು ವಿಧಿಸಿದನು.

## ೯ನೇ ತರಂಗ:—ಈ ಬಗೆಯ ಪೇಚಾಟದಿಂದೇನು ಪ್ರಯೋಜನ?

ಕಾಶಿಯೊಳಗಿನ ಹರಭಟ್ಟನ ಮನೆಯ ಆ ಮೊದಲಿನ ಅಡಿಗೆಯವಳು ಎತ್ತೋ ಮಾಯವಾಗಿದ್ದಳು. ಎಷ್ಟು ಹುಡುಕಿದರೂ ಆಕೆಯ ಪತ್ತೆಯೇ ಹತ್ತಲಿಲ್ಲ. ಶಾರದೆಯು ತನ್ನ ಗಂಡನ ಮನೆಯಿಂದ ಹೊರಟವಳು ನೆಟ್ಟಗೆ ಕಾಶಿಗೆ ಬಂದು ಹರಭಟ್ಟನ ಮನೆಯನ್ನು ಹೊಕ್ಕಳು; ಆದರೆ ಆಗ ಆ ಮನೆಯಲ್ಲಿ ಯಾರೊಬ್ಬರೂ ಇರಲಿಲ್ಲ. ಆ ವಿಶಾಲವಾದ ಮನೆಯು ಹಾಳು ಹಾಳು ಸುರಿಯುತ್ತಿತ್ತು. ಆಗ ಚಂದ್ರಕಾಂತನ ಆ ವೃದ್ಧ ಕಾರಭಾರಿಯು ರುದ್ಧಕಂಠದಿಂದ ಶಾರದೆಯನ್ನು ಕುರಿತು:—"ತಾಯಿ, ನಾನಿನ್ನು ಹೊರಡುತ್ತೇನೆ.

ಶಾರದೆಯು ಅವನಿಗೆ ನಮಸ್ಕರಿಸಿ, ಅವನತ ಮುಖದಿಂದ ಸುಮ್ಮನೆ ನಿಂತುಕೊಂಡಳು ಮಾತ್ರ. ಕಾರಭಾರಿಯು ಕಣ್ಣೀರುದುರಿಸುತ್ತ ಅಲ್ಲಿಂದ ಹೊರಟು ಹೋದನು. ಹರಭಟ್ಟನು ಮನೆಗೆ ಬರುವವರೆಗೆ ಕೂಡ ಅವನು ನಿರೀಕ್ಷಿಸಲಿಲ್ಲ; ನಿರೀಕ್ಷಿಸುತ್ತ ಕೂಡ್ರುವ ಇಚ್ಛೆಯೂ ಅವನಿಗಿರಲಿಲ್ಲ.

ಸಾಯಂಕಾಲದ ಸಮಯಕ್ಕೆ ಹರಭಟ್ಟನು ಮನೆಗೆ ಬಂದನು. ಪಡಸಾಲೆಯ ಮೇಲೆ ಕುಳಿತುಕೊಂಡಿರುವ ಶಾರದೆಯನ್ನು ಕಂಡು:—"ಯಾರವರು?" ಎಂದು ಪ್ರಶ್ನೆ ಮಾಡಿದನು.

ಶಾರದೆಯು ಎದ್ದು ಬಂದು ಹರಭಟ್ಟನ ಪಾದಗಳನ್ನು ಗಟ್ಟಿಯಾಗಿ ಹಿಡಕೊಂಡು:—"ನಾನು ಶಾರದೆ" ಎಂದಂದಳು.

"ಶಾರದೆಯೇ?" ಎಂದು ಹರಭಟ್ಟನು ವಿಸ್ಮಿತ ಕಂಠದಿಂದ ಪ್ರಶ್ನೆ ಮಾಡಿ ಆಕೆಯ ಕಡೆಗೆ ಹುಳು-ಹುಳು ಎಂದು ನೋಡತೊಡಗಿದನು. ಆಗ ಶಾರದೆಯ ಮೈ ಮೇಲೆ ಒಂದೂ ಆಭರಣವಿರಲಿಲ್ಲ. ಉಟ್ಟ ಸೀರೆಯೂ ಸಾಧಾರಣ ಹಳೇ ತರಹದ್ದೇ ಆಗಿತ್ತು. ಅವಳ ಸಂಗಡ ದಾಸ-ದಾಸಿಯರಾರೂ ಕಾಣಿಸಲಿಲ್ಲ. ಅವಳಿಂದ ಸ್ವಲ್ಪ ದೂರದಲ್ಲಿ ತಗಡಿನ ಒಂದು ಸಾಮಾನ್ಯವಾದ ಪೆಟ್ಟಿಗೆಯು ಮಾತ್ರ ಇರಿಸಲ್ಪಟ್ಟಿತ್ತು. ಆಕೆಯ ಸ್ಥಿತಿ-ಗತಿಗಳನ್ನೆಲ್ಲ ತಿಳಿದ ಹರಭಟ್ಟನು ಕರ್ಕಶ ದನಿಯಿಂದ ನುಡಿದನೇನಂದರೆ:—"ಕಡೆಗೆ ನಾನು ತರ್ಕಿಸಿದಂತೆಯೇ ಆಗಿಹೋಯಿತಲ್ಲ! ಶಾರದೇ, ಚಂದ್ರಕಾಂತನು ನಿನ್ನನ್ನು ತನ್ನ ಮನೆಯಿಂದ ಹೊಡೆದಟ್ಟಿದನಲ್ಲವೆ?"

ಶಾರದೆಯು ಏನೂ ಹೇಳದೆ ಸುಮ್ಮನೆ ನಿಂತುಕೊಂಡಳು. ಆಗ ಹರಭಟ್ಟನಿಂದ ಅದನ್ನು ಸಹಿಸುವದಾಗಲಿಲ್ಲ. ಅವನು ಕರ್ಕಶ ಧ್ವನಿಯಿಂದ ಮತ್ತೆ:—"ನಾನು ಇಲ್ಲಿ ನಿನಗೆ ಆಶ್ರಯಗೊಡಲಾರೆನು. ಒಮ್ಮೆ ಆಶ್ರಯವಿತ್ತದ್ದಕ್ಕಾಗಿಯೇ ಚೆನ್ನಾಗಿ ಅನುಭೋಗಿಸಿರುತ್ತೇನೆ. ನಾನು ಮತ್ತೆ ಆಶ್ರಯವೀಯಲಾರೆನು."

ಶಾರದೆಯು ಮುಖವನ್ನೆತ್ತಿ:-"ಭಟ್ಟರೇ, ನನ್ನ ತಾಯಿಯೆಲ್ಲಿರುತ್ತಾಳೆ?"

"ಆ ಹುಚ್ಚುಮುಂಡೆಯು ಓಡಿ ಹೋಗಿರುತ್ತಾಳೆ; ನನ್ನನ್ನು ಹಾಳು ಮಾಡಿ ಮಾಯವಾಗಿರುತ್ತಾಳೆ; ಆಕೆಯ ಶೀಲದಂತೆಯೇ ಅವಳು ಆಚರಿಸಿರುತ್ತಾಳೆ."

ಹೀಗೆಂದು ನುಡಿಯುವಾಗ ಆ ಕ್ಷೇತ್ರಸ್ಥ ಬ್ರಾಹ್ಮಣನ ಮೈಯು ಕ್ರೋಧಭರದಿಂದ ನಡುಗುತ್ತಿತ್ತು. ಬಳಿಕ ಅವನು ವ್ಯಂಗ್ಯ ದನಿಯಿಂದ:—"ಆಕೆಯು ಇಂಥಲ್ಲಿಯೇ ಇರುತ್ತಾಳೆಂಬದನ್ನು ಹೇಳುವದು ಸಾಧ್ಯವಿರದಿದ್ದರೂ ಯಾವನ ಬಳಿಯಲ್ಲಿರುವಳೋ ಅಲ್ಲಿ ಒಳ್ಳೇ ಸುಖದಿಂದಿರುವಳೆಂದು ಖಂಡಿತವಾಗಿ ಹೇಳಬಹುದಾಗಿದೆ."

ಅದನ್ನು ಕೇಳಿ ಶಾರದೆಯು ಒಮ್ಮೆಲೆ ನೆಲಕ್ಕೆ ಕುಸಿಕುಳಿತಳು. ತನ್ನ ತಾಯಿಯನ್ನು ಸೇರಬಹುದೆಂಬ ಭರವಸೆಯಿಂದ ಅವಳು ಚಂದ್ರಕಾಂತನಲ್ಲಿಂದ ಅಲ್ಲಿಗೆ ಬಂದಿದ್ದಳು. ಅದೆಲ್ಲವೂ ಈಗ ವ್ಯರ್ಥವಾಯಿತು!

ಬಳಿಕ ಹರಭಟ್ಟನು ಅನ್ನುತ್ತಾನೆ:—"ಶಾರದೆ, ನಿನಗೆ ಆಶ್ರಯಗೊಟ್ಟು ನಾನು ಕುಲಗೇಡಿಯಾಗಲಾರೆನು. ನೀನು ಯಾವಾತನ ಕೈಹಿಡಿದು ಹೋಗಿದ್ದೆಯೋ, ಅವನು ನಿನಗೆ ವಾಸಿಸಲಿಕ್ಕೆ ಒಂದಿಷ್ಟು ಸ್ಥಳವನ್ನು ಕೂಡ ಕೊಡದೆ, ಇಲ್ಲಿಗೆ ಮರಳಿ ಕಳಿಸಿ ಹೋದನಲ್ಲವೇ? ನೀನು ಇಲ್ಲಿ ಒಂದು ಕ್ಷಣ ಸಹ ನಿಲ್ಲದೆ, ಹೊರಟು ಹೋಗು."

ಶಾರದೆಯು ಅಳುತ್ತಳುತ್ತ:—"ಹರಭಟ್ಟ ಮಹಾಶಯರೇ, ನನ್ನ ತಾಯಿಯು ಪತ್ತೆಯಿಲ್ಲೆನ್ನುವಿರಿ; ಅಂದಮೇಲೆ ನಾನಿನ್ನು ಹೋಗಲಾದರೂ ಎಲ್ಲಿಗೆ?"

ಈ ಮಾತನ್ನು ಕೇಳಿಯಂತೂ ಹರಭಟ್ಟನಲ್ಲಿ ಒಂದಿಷ್ಟೂ ಸಹನಶಕ್ತಿ ಯುಳಿಯಲಿಲ್ಲ. "ಕಾಶಿಯಂಥ ವಿಶಾಲವಾದ ಪಟ್ಟಣದಲ್ಲಿ ನಿನ್ನಂಥ ತರುಣ ಸುಂದರಿಗೆ ಆಶ್ರಯಸ್ಥಾನವು ಸಿಗಲಾರವೇ? ನಿನ್ನ ಮನಸ್ಸೊಪ್ಪುವವನ ಮನೆಯನ್ನು ಆಶ್ರಯಿಸು ಹೋಗು" ಎಂದು ಮನಬಂದಂತೆ ನುಡಿದುಬಿಟ್ಟನು!

ಶಾರದೆಯ ಗಂಡನೇ ಅವಳನ್ನು ಮನೆಯಲ್ಲಿರಗೊಡದ ಬಳಿಕ, ಹರಭಟ್ಟನು ಅವಳನ್ನು ತನ್ನಲ್ಲಿರಗೊಡುವನೆ? ಈ ವಿಷಯದಲ್ಲಿ ಹರಭಟ್ಟನಿಗೆ ದೋಷಕೊಡುವದು ನಿರರ್ಥಕವೆಂಬದು ಶಾರದೆಗೆ ಚೆನ್ನಾಗಿ ಗೊತ್ತಿತ್ತು; ಆದರೆ ಆಕೆಗಾದರೂ ಆ ವಿಶಾಲವಾದ ಕಾಶಿಯಲ್ಲಿ ಬೇರೆ ಆಶ್ರಯದ ಸ್ಥಾನವೆಲ್ಲಿತ್ತು? ಆಕೆಗೆ ಆಗ ಹಿಡಿಸಲಾರದಷ್ಟು ದುಃಖವೆನಿಸಿತು. ಅವಳ ಕಣ್ಣುಗಳೊಳಗಿಂದ ಗಂಗಾ-ಯಮುನಾ ಪ್ರವಾಹವು ಧಾರೆಗಟ್ಟಿ ಹರಿಯುತ್ತಿತ್ತು. ಆಗ ಆಕೆಗೆ ಹದಿನೆಂಟೇ ವಯಸ್ಸುಗಳಾಗಿದ್ದರೂ, ಲೋಕವೊಳಗಿನವೆಲ್ಲವೂ ಬೇಸರವಾಗಿತ್ತು. ತಂದೆಯಿಲ್ಲ; ತಾಯಿಯಿಲ್ಲ ಗಂಡನಿಂದ ಪರಿತ್ಯಕ್ತಳಾಗಿದ್ದಾಳೆ. ಒತ್ತಟ್ಟಿಗೆ ನಿಲ್ಲಲಿಕ್ಕೆ ಸ್ಥಳವೂ ಇಲ್ಲ. ಇವೆಲ್ಲ ಕಡೆಯಿಂದಲೂ ನಾಸ್ತಿಪಕ್ಷವಾಗಿರಲು, ದುಷ್ಕಲಂಕವೊಂದು ಮಾತ್ರ ಅವಳಿಗೆ ಅಸ್ತಿಪಕ್ಷವಾಗಿದ್ದಂತೆ, ನಾಚಿಕೆಯೂ, ವಿಪುಲವಾದ ರೂಪಲಾವಣ್ಯವೂ ಅವಳಲ್ಲಿ ಹೆಚ್ಚಾಗಿದ್ದವು. ಎಷ್ಟೋ ಜನ ಮುದುಕರಿಗೂ ಕೂಡ ತಾವು ಇನ್ನೂ ಕೆಲ ದಿನಗಳ ವರೆಗೆ ಬದುಕಿರಬೇಕೆಂಬ ಆಶೆಯಿರುತ್ತವೆ, ಆದರೆ ಶಾರದೆಗೆ ಮಾತ್ರ ತನ್ನ ಜೀವಿತವು ಸಾಕು-ಸಾಕಾಗಿ ಹೋಗಿತ್ತು. 'ನನಗೆ ಇನ್ನೆಷ್ಟು ಆಯುಷ್ಯವಿದೆಯವ್ವಾ? ನಾನಿನ್ನೂ ಎಷ್ಟು ದಿನಗಳ ವರೆಗೆ ಬದುಕಿರಬೇಕವ್ವಾ?' ಎಂದು ಅವಳು ಚಿಂತಿಸುತ್ತಿದ್ದಳು. ಅದು ಹೇಗೆಯೇ ಇರಲಿ. ಇಂದು ಶಾರದೆಯು ಹೊಸ ಜೀವನಕ್ಕೆ ಪ್ರಾರಂಭವಾದಂತಾಗಿತ್ತು. ಅವಳಿಗೆ ದುಃಖ-ಕಷ್ಟಗಳ ಪರಿಚಯವು ಬಾಲ್ಯದಿಂದಲೂ ಚೆನ್ನಾಗಿದ್ದರೂ ಇಂದಿನಂತಹ ತೀವ್ರತರವಾದ ಅವಮಾನವೂ ಲಾಂಛನವೂ ಅವಳಿಗೆಂದೂ ಪ್ರಾಪ್ತವಾಗಿರಲಿಲ್ಲ. ಹರಭಟ್ಟನಂತೂ ಅವಳನ್ನು ತನ್ನ ಮನೆಯ ಬಾಗಿಲ ಬಳಿಯಲ್ಲಿ ಕೂಡ ನಿಲ್ಲಗೊಡದೆ, ಗಟ್ಟಿಗಟ್ಟಿಯಾಗಿ ಒದರುತ್ತ:-"ಏಕೆ? ನೀನು ಇನ್ನೂ ಇಲ್ಲೇಕೆ ನಿಂತೆ?" ಎಂದು ಕೇಳಹತ್ತಿದನು.

ಕಡೆಗೆ ಶಾರದೆಯು ಒಳ್ಳೇ ಧೈರ್ಯದಿಂದ:—"ಭಟ್ಟರೇ, ಈಗ ನಾನು ಹೋಗಲಾದರೂ ಎಲ್ಲಿಗೆ?" ಎಂದು ಕೇಳಲು,

"ನಾನು ಅದನ್ನೇನು? ಹೇಳಲಿ?"

ಶಾರದೆಯು ರುದ್ಧಕಂಠದಿಂದ:--"ಹರಭಟ್ಟರೇ, ನನ್ನನ್ನು ಇಲ್ಲಿ ಇಂದಿನ ರಾತ್ರಿಯ ಮಟ್ಟಿಗಾದರೂ ಇರಗೊಡಿರಿ........"

"ಛೇ-ಛೇ! ನೀನು ಇನ್ನು ಇಲ್ಲಿ ಒಂದು ಗಳಿಗೆ ಕೂಡ ಇರಬೇಡ."

ಕೂಡಲೆ ಶಾರದೆಯು ನಿಂತ ಸ್ಥಳದಿಂದ ತುಸ ಸರಿದು:—"ಸಾವಿರಾರು ತಪ್ಪು ಮಾಡಿದ್ದರೂ ಯಾರ ಬಳಿಯಲ್ಲಿ ಕ್ಷಮೆ ಬೇಡುವ ಅಧಿಕಾರವು ನನಗಿದ್ದಿತೋ, ಅವರ ಬಳಿಯಲ್ಲಿ ಕೂಡ ಕ್ಷಮೆ ಯಾಚಿಸದೆ ಇಲ್ಲಿಗೆ ಬಂದ ನಾನು, ಇನ್ನು ಇಲ್ಲಿ, ಈ ತ್ರಯಸ್ಥರ ಬಳಿಯಲ್ಲಿ ದೀನವಾಣಿಯಿಂದ ಯಾಚಿಸಬೇಕೇ? ಬೇರೆ ಕಡೆಗಳಲ್ಲೆಲ್ಲೂ ಆಶ್ರಯ ದೊರೆಯದಿದ್ದರೆ, ಈ ಕಾಶಿಯ ಗಂಗಾಮಾತೆಯ ವಿಶಾಲವಾದ ವಕ್ಷಸ್ಥಳದಲ್ಲಿ ನನಗೆ ಆಶ್ರಯ ದೊರೆಯದೇನು? ಆ ಗಂಗೆಯು ಯಾವ ಸಮಾಜದ ಭಯದಿಂದಲೂ ನನ್ನನ್ನು ಪರಿತ್ಯಜಿಸಲಾರಳು. ತನ್ನ ಜಾತಿ-ಕುಲಗಳು ಕೆಡುವ ಭಯದಿಂದ ನನ್ನನ್ನು ತಿರಸ್ಕರಿಸಲಾರಳು. ಗಂಗಾಮಾತೆಯು ಈ ದುಃಖಿನಿಯನ್ನು ಬಹು ಪ್ರೇಮದಿಂದ ತನ್ನ ವಕ್ಷಸ್ಥಳಕ್ಕೆಳೆದುಕೊಂಡು ಆಶ್ರಯನೀಯುವಳು. ಇನ್ನು ನನಗೆ ಬೇರೆ ಜನರ ಆಶ್ರಯದ ಆವಶ್ಯಕತೆಯೇ ಇರುವದಿಲ್ಲ" ಎಂದವಳೇ ಗಂಗಾನದಿಯ ಘಾಟಿನ ಕಡೆಗೆ ನಡೆದಳು; ಆದರೆ ಆಗ ಅವಳು ದುಃಖಪರಂಪರೆಯಿಂದ ಶೀರ್ಣಜರ್ಜರಿತಳಾದ್ದರಿಂದ, ಅವಳಿಂದ ನಾಲ್ಕಾರು ಹೆಜ್ಜೆ ಕೂಡ ನಡೆದು ಹೋಗುವದಾಗದ್ದರಿಂದ ಮತ್ತೆ ಒಮ್ಮೆಲೆ ದೊಪ್ಪೆಂದು ನೆಲಕ್ಕೆ ಕುಸಿ ಕುಳಿತಳು.

ಹರಭಟ್ಟನು ಈ ಜನ್ಮದಲ್ಲೆಂದೂ ಇಂಥ ವಿಪತ್ತಿಗೆ ಗುರಿಯಾಗಿರಲಿಲ್ಲ. ಒದರಾಟ-ಚೀರಾಟದಿಂದ ಅಂದು ಆತನ ಗಂಟಲು ಕೂಡ ಆರಿಹೋಗಿತ್ತು; ಹೀಗೆ ದಣಿದಿದ್ದ ತಾನು ಇನ್ನು ಸುಮ್ಮನಿದ್ದರೆ, ಎಲ್ಲಿ ಈ ಪೀಡೆಯು ತನ್ನ ಮನೆಯನ್ನೇ ಅಂಟಿಕೊಳ್ಳುವದೋ ಎಂಬ ಭೀತಿಯಿಂದ ಅವನು ಮತ್ತಿಷ್ಟು ಗೊಗ್ಗರ ದನಿಯಿಂದ ಒದರುತ್ತ:—"ಶಾರದೇ, ನಿನಗೆ ಅವಮಾನವು ಸಹನವಾಗದಿದ್ದರೆ ಬಿಡು; ಆದರೆ ನೀನು ಇನ್ನು ಇಲ್ಲಿ ಒಂದು ಕ್ಷಣ ಕೂಡ ನಿಲ್ಲದೆ, ನಿನಗೆ ತಿಳಿದಲ್ಲಿಗೆ ಕೂಡಲೆ ಹೊರಟು ಹೋಗು."

ಹರಭಟ್ಟನು ಹೀಗೆಂದು ನುಡಿಯುವ ಕಾಲಕ್ಕೆ ದೂರಿನಿಂದ:-"ತಮ್ಮಾ, ಹರಭಟ್ಟಾ, ಏನು ನಡೆಸಿರುವೆಯಪ್ಪಾ?" ಎಂಬ ಧ್ವನಿಯು ಕೇಳಿಸಿತು.

ಓಣಿಯೊಳಗಿಂದ ಮಾಬಳಜ್ಜನೇ ಬರುತ್ತಿರುವನೆಂಬದನ್ನು ತಿಳಿದ ಹರಭಟ್ಟನು ವ್ಯಗ್ರಚಿತ್ತದಿಂದ:—"ಅಜ್ಜಾ, ನೋಡಿದೆಯಾ? ಇವಳಾರು ಬಂದಿರುವಳೆಂಬದನ್ನು?" ಎಂದನು. ಇಷ್ಟರಲ್ಲಿ ಮಾಬಳಜ್ಜನು ಅಲ್ಲಿಗೆ ಬಂದೇಬಿಟ್ಟನು. ಅವನ ಒಂದು ಕೈಯಲ್ಲಿ ಚದುರಂಗದ ಡಬ್ಬಿಯೂ ಮತ್ತೊಂದು

ಕೈಯಲ್ಲಿ ಗುಡುಗುಡಿಯೂ ಶೋಭಿಸುತ್ತಿದ್ದವು. ಅವನು ತನ್ನ ಮನೆಯಿಂದ ಈಗ ತಾನೆ ಬಂದಿದ್ದನೆಂತಲ್ಲ; ಅವನು ಮನೆಯಿಂದ ಹೊರಟು ಬಹಳ ಹೊತ್ತಾಗಿತ್ತು. ಹರಭಟ್ಟನ ಮನೆಯ ಬಳಿಗೆ ಬರಲು, ಹರಭಟ್ಟನು ಯಾರೊಡನೆಯೋ ವಾದಿಸ್ಯಾಡುತ್ತಿರುವದನ್ನು ದೂರಿಸಿಂದಲೇ ಕೇಳಿದ ಮಾಬಳಜ್ಜನು, ಅಲ್ಲಿಯೇ ಒತ್ತಟ್ಟಿಗೆ ಮರೆಗೆ ನಿಂತುಕೊಂಡು ಅವರ ಸಂಭಾಷಣವನ್ನು ಕೇಳುತ್ತಿದ್ದನು. ಅಲ್ಲಿಗೆ ಬಂದ ಮಾಬಳಜ್ಜನು ನೆಟ್ಟಗೆ ಶಾರದೆಯ ಬಳಿಗೆ ಹೋಗಿ: "ಶಾರಕ್ಕಾ ಈಗ ತಾನೆ ಬಂದೆಯೇನು?" ಎಂದು ಕೇಳಿದನು.

ಶಾರದೆಯು ಮಾಬಳಜ್ಜನನ್ನು ಕಂಡಕೂಡಲೆ ನಮುಸ್ಕರಿಸಿ ಸುಮ್ಮನೆ ನಿಂತುಕೊಂಡಳು.

ಮಾಬಳಜ್ಜನು ಅವಳನ್ನು ಆಶೀರ್ವದಿಸುತ್ತ:—"ತಂಗೀ, ಶಾರವ್ವಾ, ಬಾ; ನಿನ್ನ ಅಜ್ಜನ ಮನೆಗೆ ಬಾರದೆ ಇಲ್ಲಿಗೇಕೆ ಬಂದೆ? ನಡೆ, ನನ್ನೊಡನೆ" ಎಂದವನೇ, ತನ್ನ ಕೈಯೊಳಗಿನ ಗುಡುಗುಡಿಯನ್ನು ಕೆಳಗಿರಿಸಿ, ಅವಳ ಆ ತಗಡಿನ ಡಬ್ಬಿಯನ್ನು ಹೊತ್ತುಕೊಂಡು, ಮತ್ತೆ ಆ ಗುಡುಗುಡಿಯನ್ನು ಹಿಡಕೊಂಡು ಪುನಃ:—"ತಂಗೀ, ಶಾರಕ್ಕಾ, ನಡೆ ಮನೆಗೆ. ಕತ್ತಲು ಬೀಳಹತ್ತಿದೆ" ಎಂದು ಕೇವಲ ಅವಳನ್ನು ಕರೆಯಲಿಕ್ಕೆಂದು ಬಂದವನ ಹಾಗೆಯೇ ಅಂದನು.

ಶಾರದೆಯು ಯಾವದೊಂದನ್ನೂ ನಿಸ್ಕರಿಸದೆ, ಏನೊಂದೂ ಮಾತಾಡದೆ, ಕಣ್ಣೀರುದುರಿಸುತ್ತ ಅಧೋವದನಳಾಗಿ ಸುಮ್ಮನೆ ಕುಳಿತಿದ್ದನು.

ಅದನ್ನು ಕಂಡು ವ್ಯಗ್ರಚಿತ್ತನಾದ ಮಾಬಳಜ್ಜನು ಶಾರದೆಯನ್ನು ಕುರಿತು ಮತ್ತೆ:—"ತಂಗೀ, ಶಾರಕ್ಕಾ, ನಿನ್ನ ಈ ಮುಪ್ಪಿನ ಅಜ್ಜನ ಮನೆಗೆ ಬರಲಿಕ್ಕೆ ನಿನಗೇತರ ನಾಚಿಕೆ? ಅಲ್ಲಿ ನಿನಗಾರೂ ಅವಮಾನದ ಬಿರಿನುಡಿಗಳನ್ನು ಆಡತಕ್ಕವರಿಲ್ಲ. ನಾನೂ-ನೀನೂ ನನ್ನ ಮನೆಯಲ್ಲಿದ್ದದ್ದನ್ನುಂಡು ಸುಖದಿಂದ ಕಾಲಯಾಪನೆ ಮಾಡೋಣ. ನಡೆ, ತಂಗೀ, ತಡವಾಗುವದು ನಡೆ" ಎಂದಂದನು.

ಆದರೂ ಶಾರದೆಯು ಅಲ್ಲಿಂದ ಎದ್ದೇಳಲಿಲ್ಲ.

ಆಗ ಹರಭಟ್ಟನು ಒಳ್ಳೇ ಆಕ್ರೋಶದಿಂದ ಅನ್ನುತ್ತಾನೆ:—"ಮಾಬಳಜ್ಜಾ, ಮುದುಕಾ, ಇದೇನನ್ನು ನಡೆಸಿರುವೆ?"

"ತಮ್ಮಾ, ಏನೂ ಇಲ್ಲ" ಎಂದಂದವನೆ, ಶಾರದೆಯ ತೀರ ಹತ್ತಿರಕ್ಕೆ ಬಂದು, ಅವಳನ್ನು ಕೈ ಹಿಡಿದು ಎಬ್ಬಿಸುವನೋ ಎನೋ ಎನ್ನುವ ಹಾಗೆ ನಟಿಸಿ, ಆಕೆಯನ್ನು ಕುರಿತು:—"ತಂಗೀ, ಈ ಬಗೆಯ ಹಟಮಾರಿತನವು ತಕ್ಕದ್ದಲ್ಲ. ನಡೆ ಬೇಗನೆ, ನನ್ನ ಮನೆಗೆ ನಡೆ" ಎನ್ನಲು,

ಶಾರದೆಯು ಕುಳಿತಲ್ಲಿಂದ ಎದ್ದು ನಿಂತಳು. ಅದನ್ನು ಕಂಡು ಹರಭಟ್ಟನು ಮತ್ತೆ ಆಕ್ರೋಶದಿಂದ:—"ಅಜ್ಜಾ, ನೀನು ಇವಳನ್ನು ನಿನ್ನ ಮನೆಗೆ ಕರೆದೊಯ್ಯುತ್ತಿರುವಿಯೇನು?"

"ಇಲ್ಲಪ್ಪಾ-ಇಲ್ಲ; ಇವಳನ್ನು ದಾರಿಯಲ್ಲಿ ಬಿಟ್ಟುಬರುತ್ತೇನೆ."

ಮಾಬಳಜ್ಜನ ವ್ಯಂಗ್ಯೋಕ್ತಿಯನ್ನು ಕೇಳಿ ಹರಭಟ್ಟನು:—"ಆದರೆ ಅಜ್ಜಾ, ಈಗ ನೀನು ನಡೆಸಿರುವ ಉದ್ಯೋಗವು ಸರಿಯಾದದ್ದಲ್ಲ. ನಾಳೆ ಈ ಬಗ್ಗೆ ಏನಾದೀತೆಂಬದನ್ನು ಈಗಲೇ ಆಲೋಚಿಸಿ ನೋಡು."

ಮಾಬಳಜ್ಜನು ಹರಭಟ್ಟನಿಗೆ ಏನೊಂದೂ ಉತ್ತರವೀಯಲಿಲ್ಲ; ಆದರೆ ಶಾರದೆಗೆ ಮಾತ್ರ:—"ತಂಗೀ, ಬೇಗ-ಬೇಗನೆ ನಡೆಯಬಾರದೇ? ಮೆಲ್ಲಗೆ ಸಾಗಿದರೆ ಈತನು ಮತ್ತೇನನ್ನಾದರೂ ಅನ್ನತಕ್ಕವನೆ" ಎಂದು ಹೇಳಿದನು.

ಶಾರದೆಯು ಹರಭಟ್ಟನ ಒಳಂಗಳವನ್ನು ದಾಟಿ ಹೊರಗೆ ಬಂದಳು. ಮಾಬಳಜ್ಜನು ಆಕೆಯ ಪೆಟ್ಟಿಗೆಯನ್ನು ಹೊತ್ತುಕೊಂಡು ಅವಳ ಹಿಂದಿನಿಂದ ನಡೆದನು.

ಹರಭಟ್ಟನು ಹಿಂದಿನಿಂದಲೇ ಕೂಗುತ್ತಾನೆ:—"ಮಾಬಳಜ್ಜಾ, ಈ ಮುಪ್ಪಿನ ಕಾಲಕ್ಕೆ ಕುಲಕೆಡಿಸಿಕೊಳ್ಳಲಿಕ್ಕೆ ಸಿದ್ಧನಾದೆಯಾ?"

ಮಾಬಳಜ್ಜನು ದಾರಿ ನಡೆಯುತ್ತಲೆ:—"ತಮ್ಮಾ, ಹರಭಟ್ಟಾ, ನೀನು ಮಾತ್ರ ಕುಲದೀಪಕನಾಗಿರು, ಎಂದರಾಯಿತು" ಎಂದನು.

"ಹಾಗಾದರೆ ಅಜ್ಜಾ, ಇಂದಿನಿಂದ ನನ್ನ ನಿನ್ನಲ್ಲಿ ಆಹಾರ-ವ್ಯವಹಾರಗಳು ಕಟ್ಟಾದಂತಾದವು."

ಆಗ ಮಾಬಳಜ್ಜನು ಹಿಂದುರುಗಿ ನಿಂತು:—"ತಮ್ಮಾ, ಹರಭಟ್ಟಾ, ಈ ಮಹಾ..ಳನು ಎಂದು ಮತ್ತು ಯಾರ ಮನೆಯಲ್ಲಿ ಊಟ ಮಾಡಿರುವನು?"

"ನೀನು ಯಾರಲ್ಲಿಯೂ ಊಟಕ್ಕೆ ಹೋಗದಿದ್ದರೂ, ಬಹು ಎಚ್ಚರದಿಂದ ಪ್ರಸ್ತುತದ ಪ್ರಸಂಗಕ್ಕೆ ತೊಡಗು."

ಮಾಬಳಜ್ಜನು ಹುಬ್ಬುಗಂಟಿಕ್ಕಿದನು. ಕಾಶಿಯಲ್ಲಿ ಬಂದಿರಹತ್ತಿದಂದಿನಿಂದ ಅವನು ಇದುವರೆಗೆ ಎಂದೂ ಯಾರ ಮೇಲೆಯೂ ಸಿಟ್ಟಾಗಿರಲಿಲ್ಲ. ಕಾಶಿಯಲ್ಲಿ ಇಂದೇ ಅವನು ಎಲ್ಲಕ್ಕೂ ಮೊದಲು ಸಿಟ್ಟುಬೆಂಕಿಯಾದದ್ದು. ಆಗ ಮಾಬಳಜ್ಜನು ಕ್ರೋಧಭರದಿಂದ:—"ಯಾಕೋ, ಹರಭಟ್ಟಾ, ನನ್ನನ್ನೇನು ಕ್ಷೇತ್ರಸ್ಥ ಬ್ರಾಹ್ಮಣನೆಂದು ತಿಳಿದಿರುವಿಯಾ? ಕ್ಷೇತ್ರಸ್ಥರಂತೆ ಯಜಮಾನನು ನೀಡುವ ತುತ್ತು ಕೂಳಿಗಾಗಿ ನಾನು ಮಂದಿಯ ಬಾಲ ಬಡಿಯುವವನೇ? ನನಗೆ ಏನೆಂದು ಅಂಜಿಕೆ ತೋರುವೆ? ನನ್ನ ಮನಸ್ಸಿಗೆ ಸರಿದೋರುವ ಕೆಲಸ

ವನ್ನು ನಾನು ಇದುವರೆಗೆ ಯಾರ ಭಿಡೆ-ಮುರವತ್ತುಗಳನ್ನೂ ಲೆಕ್ಕಿಸವೆ ಮಾಡುತ್ತ ಬಂದಂತೆ ಇನ್ನು ಮುಂದೆಯೂ ಮಾಡುತ್ತಿರುವೆನು. ಇಂದಾದರೂ ಅದರಂತೆಯೇ ವರ್ತಿಸಿರುವೆನು. ಈ ಬಗ್ಗೆ ನೀನು ಯೋಚಿಸುವ ಕಾರಣವಿರುವದಿಲ್ಲ."

ಅವನ್ನು ಕೇಳಿ ಹರಭಟ್ಟನ ಸೊಂಡೆಯೊಣಗಿತು. ಆದರೂ ಅವನು ಮೆಲ್ಲಗೆ:--"ಅಜ್ಜಾ, ನನ್ನದೇನೂ ಒತ್ತಾಯವಿಲ್ಲ. ನಿನ್ನ ಹಿತಕ್ಕಾಗಿಯೇ...."

"ಸಾಕು-ಸಾಕು; ಹರಭಟ್ಟರೆ, ಸಾಕು. ಕಳೆದ ೫೦ ವರ್ಷಗಟ್ಟಲೆಯ ಕಾಲವನ್ನು ನಾನು ನನ್ನ ಮನಸ್ಸಿನಂತೆ ನಡೆದು, ಈ ಕಾಶೀ ಕ್ಷೇತ್ರದಲ್ಲಿ ಬಾಳು ಮಾಡಿರುತ್ತೇನೆ. ಇನ್ನು ಬಹಳವಾದರೆ, ಬಾಕಿಯುಳಿದಿರುವ ನನ್ನ ಆಯುಸ್ಸಿನ ೪-೬ ವರ್ಷಗಳನ್ನು ನಿನ್ನ ಹಿತೋಕ್ತಿಗಳಂತೆ ನಡೆದು ಬಾಳುವೆನೇ? ಹೋಗು, ಹರಭಟ್ಟಾ, ಸುಮ್ಮನೆ ನಿನ್ನ ಮನೆಗೆ ಹೊರಟು ಹೋಗು."

ಕೂಡಲೆ ಹರಭಟ್ಟನು ಸುಮ್ಮನೆ ಹಿಂದಿರುಗಿದನು.

ಮಾಬಳಜ್ಜನು ಮನೆಗೆ ತಲುಪಿ, ತನ್ನ ತಲೆಯ ಮೇಲಿನ ಪೆಟ್ಟಿಗೆಯನ್ನಿಳಿಸಿ, ಶಾರದೆಯನ್ನು ಕುರಿತು ಸಹಜವಾಗಿ ಅನ್ನುತ್ತಾನೆ:—"ತಂಗೀ, ಈ ಮನೆ-ಮಾರುಗಳೆಲ್ಲ ನಿನ್ನವೇ ಆಗಿವೆ. ನಾನು ಕೇವಲ ನಿನ್ನ ಹಿತಕಾಂಕ್ಷಿಯು. ಈ ಮುದುಕನ ಹೊಟ್ಟೆಗಿಷ್ಟು ಹಾಕು; ಹಾಗು ಈ ಮನೆಯ ಹಿರಿಯತನವನ್ನೆಲ್ಲ ನೀನೇ ನಿನ್ನಿಷ್ಟದಂತೆ ಸಾಗಿಸಿಕೊಂಡು ಹೋಗು, ಅಂದರಾಯಿತು. ತಂಗೀ ನಾನು ನಿನಗೆ ಇದಕ್ಕೂ ಹೆಚ್ಚಿಗಿನ್ನೇನು ಹೇಳಲಿ?"

ಮಾಬಳಜ್ಜನು ಹೆಚ್ಚು ಮಾತಾಡದಾದನು. ಅದಕ್ಕೂ ಹೆಚ್ಚಿಗೆ ಹೇಳತಕ್ಕದ್ದಾದರೂ ಏನಿದ್ದಿತು? ರುದ್ಧಕಂಠದಿಂದ ಆ ಮುದುಕನು ಒತ್ತಟ್ಟಿಗೆ ಕುಳಿತುಬಿಟ್ಟನು. ಶಾರದೆಯೂ ಕಣ್ಣೀರುದುರಿಸುತ್ತ ಕುಳಿತುಬಿಟ್ಟಳು.

† † † † † †

ಶರತ್ಕಾಲದ ಸುಪ್ರಭಾತ ಕಾಲದಲ್ಲಿ ಮೇದಿನಿಯು ಒಳ್ಳೇ ಸ್ನಿಗ್ಧಭಾವವನ್ನು ತಾಳಿರಲು, ಬೆಳತನಕ ಜಾಗರಣೆ ಮಾಡುವ ಚಂದ್ರಕಾಂತನಿಗೆ ಒಳ್ಳೇ ಗಾಢವಾದ ನಿದ್ರೆಯು ಹತ್ತುತ್ತಿತ್ತು; ಅಲ್ಪಾವಕಾಶದಲ್ಲಿಯೇ ತಪ್ತಸೂರ್ಯಕಿರಣಗಳು ಕಿಟಿಕೆಗಳ ದ್ವಾರದಿಂದ ಆತನ ಮುಖದ ಮೇಲೂ ಕಣ್ಣುಗಳ ಮೇಲೂ ಬೀಳಲು, ಅದರಿಂದ ಆತನ ನಿದ್ದೆಯು ಹಾರಿ ಆತನಿಗೆ ಚೆನ್ನಾಗಿ ಎಚ್ಚರವಾಗುತ್ತಿತ್ತು. ಆದರೂ ಹಾಸಿಗೆಯಿಂದೆದ್ದು ತನ್ನ ನಿತ್ಯ ಕ್ರಮಕ್ಕೆ ತೊಡಗಬೇಕೆಂಬ ಚೇತನೆಯು ಮಾತ್ರ ಅತನಿಗುಂಟಾಗಲೊಲ್ಲದು. ಕೆಲ

ಹೊತ್ತಿನ ಮೇಲೆ ಆತನು ಹೇಗಾದರೊಮ್ಮೆ ಹಾಸುಗೆಯು ಬಿಟ್ಟಿದ್ದು ಹೊರಗೆ ಬಂದನು. ಇತ್ತೀಚೆಗೆ ಚಂದ್ರಕಾಂತನ ಮನಸ್ಸು ಯಾವ ಕೆಲಸ-ಬೊಗಸೆಗಳಲ್ಲಿಯೂ ನಿಮಗ್ನವಾಗುತ್ತಿರಲಿಲ್ಲ; ಆಮೋದ-ಪ್ರಮೋದಗಳಲ್ಲೂ ರತವಾಗುತ್ತಿರಲಿಲ್ಲ. ಉತ್ಸಾಹವಂತೂ ಮೊದಲೇ ಇರಲಿಲ್ಲ; ಇನ್ನು ಅವನು ಸದಾ ದುಃಖ-ಕ್ಲೇಶಪಡುತ್ತಿದ್ದನೆನ್ನಬೇಕೇ, ಹಾಗೇನೂ ಇಲ್ಲ. ಸುಖೋಪಭೋಗೇಚ್ಛೆಯನ್ನಂತೂ ಆತನು ಸಂಪೂರ್ಣವಾಗಿ ತ್ಯಜಿಸಿಬಿಟ್ಟಿದ್ದನು. ಹರಿಗಡಿದು ಕೃಶಳಾಗಿ ಹರಿಯುತ್ತಿದ್ದ ನದಿಯ ನೀರಲ್ಲಿ ಸಂಧ್ಯಾಕಾಲದಲ್ಲಿ ದೀರ್ಘಭಾರವಾಹಿಯಾದ ತರುಣಿಯು ಯಾವ ಪ್ರಕಾರವಾಗಿ ಇತ್ತಿಂದತ್ತ ಅತ್ತಿಂದಿತ್ತ, ಎಡವುತ್ತ ಮುಗ್ಗುತ್ತ, ಬೀಳುತ್ತ ಏಳುತ್ತ ಮಂಥರಗಮನದಿಂದ ಸ್ವೇಚ್ಛಾಚಾರಿಣಿಯಾಗಿ ಕಾಣುವಳೋ, ಚಂದ್ರಕಾಂತನ ಭಾವೀ ಕಾಲವಾದರೂ ಕೇವಲ ತದ್ರೂಪವಾಗಿ ಒಂದು ಪ್ರಾತಃಕಾಲದಿಂದ ಮತ್ತೊಂದು ಪ್ರಾತಃಕಾಲದವರೆಗೆ ಕಳೆದು ಹೋಗುವದರಲ್ಲಿತ್ತು. ನಡು ಮಧ್ಯಾಹ್ನದಲ್ಲಿಯೇ ತನ್ನ ಸುಖವೆಂಬ ಸೂರ್ಯನನ್ನು ದಿಗಂತದಲ್ಲಿ ಹಬ್ಬಿದ ಕಾರ್ಮೋಡಗಳು ಮುತ್ತಿಬಿಟ್ಟಿರುವವೆಂದೂ, ಆ ಕಾರ್ಮೋಡಗಳ ಆವರಣದಲ್ಲಿಯೇ ಆ ಸೂರ್ಯನು ಯಾವದೊಂದು ದಿನ ಅಸ್ತಂಗತನಾಗುವನೆಂದೂ ಚಂದ್ರಕಾಂತನು ಚೆನ್ನಾಗಿ ತಿಳಿದಿದ್ದನಲ್ಲವೆ, ಈ ಜನ್ಮದಲ್ಲಿ ಇನ್ನು ಆ ಸುಖವೆಂಬ ಸೂರ್ಯನನ್ನು ತಾನೆಂದೂ ಕಾಣಲಾರೆನೆಂದೂ ಆತನು ದೃಢವಾಗಿ ನಂಬಿಕೊಂಡಿದ್ದನು. ಆತನ ಆ ನಿರ್ಜನವಾದ ಖಾಸ ಕೋಣೆಯಲ್ಲಿ ಈ ಬಗೆಯ ನಿರಾಶೆಯ ಕಪ್ಪುಮೂರ್ತಿಯು ದಿನದಿನಕ್ಕೆ ಹೆಚ್ಚೆಚ್ಚು ಕಪ್ಪುಬಣ್ಣದ್ದಾಗಿ ತೋರಲಾರಂಭಿಸಿತು. ಚಂದ್ರಕಾಂತನು ಅಂಥ ಆ ಭಯಾನಕ ಸ್ಥಿತಿಯಲ್ಲಿ ಕುಳಿತೇ, ಆಲಸಿಗನಾಗಿ ಕಾಲ ಕಳೆಯ ಹತ್ತಿದನು.

ಬರುವ ಮಾರ್ಗಶಿರ ಮಾಸದಲ್ಲಿಯೇ ಚಂದ್ರಕಾಂತನು ಮತ್ತೆ ಲಗ್ನವಾಗುವನೆಂದು ಶಶಿಮುಖಿಯು ಜನರಲ್ಲಿ ಹೇಳಿಕೊಳ್ಳ ಹತ್ತಿದಳು; ಆದರೆ ಚಂದ್ರಕಾಂತನು ಮಾತ್ರ ಆ ಬಗ್ಗೆ ಏನೊಂದೂ ಹೇಳದೆ, ಸ್ತಬ್ಧವಾಗಿರುತ್ತಿದ್ದನು. ಆತನ ಆ ಮೌನದ ಅರ್ಥವು ಸಮ್ಮತಿ ಸೂಚಕವೋ-ಅಸಮ್ಮತಿ ಸೂಚಕವೋ ಎಂಬ ಬಗ್ಗೆ ಶಶಿಮುಖಿಯು ಗಂಡನೊಡನೆ ಚರ್ಚಿಸುತ್ತಿದ್ದಳು; ಅಲ್ಲದೆ ಆ ದಂಪತಿಗಳಿರ್ವರೂ ಮಾರ್ತಂಡರಾಯನಲ್ಲಿಗೆ ಹೋಗಿ: "ಈ ಬಗ್ಗೆ ನಿಮ್ಮ ಅಭಿಪ್ರಾಯವೇನೆ"ಂದು ಕೇಳಲು, "ಚಂದ್ರಕಾಂತನನ್ನು ಪ್ರತ್ಯಕ್ಷವಾಗಿ ಕೇಳದ ಹೊರತು, ಯಾವುದನ್ನೂ ಹೇಳಲಿಕ್ಕಾಗುವದಿಲ್ಲೆ"ಂದು ಆತನು ಅನ್ನುತ್ತಿದ್ದನು.

ಇಂದು ಊರೊಳಗೆಲ್ಲ ಕಾರ್ತಿಕ ಮಾಸದ ದುರ್ಗಾಪೂಜೆಯು ನಡೆದಿತ್ತು. ಮಾರ್ತಂಡರಾಯನ ಮನೆಯ ಅಂಗಳದಲ್ಲಿ ಪ್ರಾತಃಕಾಲದಿಂದಲೂ ಊದುತ್ತಿದ್ದ ಸುಶ್ರಾವ್ಯವಾದ ಸನಾಯಿಯ ಸುನಾದವು ಗ್ರಾಮವಾಸಿಗಳ ಕಿವಿಗಳಲ್ಲೆಲ್ಲ ಆಗಾಮಿ ಆನಂದದ ವಾರ್ತೆಯನ್ನು ಘೋಷಿಸತೊಡಗಿತ್ತು. ಆ ಸುನಾದದ ಶ್ರವಣದಿಂದ ಚಂದ್ರಕಾಂತನ ನಿದ್ದೆಯು ಭಂಗವಾಯಿತು. ಆತನು ಅರೆಗಣ್ಣು ತೆರೆದು ಹಾಸುಗೆಯ ಮೇಲೆಯೇ ಹೊರಳಾಡುತ್ತಿರಲು, ಸನಾಯಿಗಾರನ ಎಷ್ಟೋ ಸುಂದರ ಪದಗಳು ಆತನಿಗೆ ಕೇಳಿಸಿದವು; ಆದರೆ ಆ ಸುಂದರ ಪದಗಳಲ್ಲಿಯ ಒಂದು ಪದವಾದರೂ ಆತನಲ್ಲಿ ಒಂದಿಷ್ಟೂ ಆನಂದವನ್ನುಂಟು ಮಾಡಲಿಲ್ಲ; ಇಷ್ಟೇ ಅಲ್ಲ, ಅದಕ್ಕೆ ವಿಪರೀತವಾಗಿ ಅವುಗಳ ಶ್ರವಣದಿಂದ ಆತನ ಹೃದಯಾಕಾಶದಲ್ಲಿ ಗಾಢವಾದ ಕಾರ್ಮೋಡಗಳು ಮಾತ್ರ ಹಿಂಡುಗಟ್ಟಿಕೊಂಡು ಬಂದು ತುಂಬಿಬಿಟ್ಟವು. ಅದರಿಂದ ಆತನ ಮನಸ್ಸಿನಲ್ಲಿ ಆಕಸ್ಮಾತ್ತಾಗಿ ಬಂದುದೇನಂದರೆ, ನಾನು ಇನ್ನು ಇಲ್ಲಿ ಇರಕೂಡದೆಂದು. ಕೂಡಲೆ ಚಂದ್ರಕಾಂತನು ತನ್ನ ಒಬ್ಬ ಸೇವಕನನ್ನು ಕರೆದು:—“ಎಲಾ, ನನ್ನ ಸಾಮಾನುಗಳನ್ನೆಲ್ಲ ಬೇಗನೆ ಕಟ್ಟಿ ಸಿದ್ಧಗೊಳಿಸು. ನಾನಿಂದು ಪ್ರಯಾಗಕ್ಕೆ ಹೊರಡುವೆನು” ಎಂದು ಅಪ್ಪಣೆ ಮಾಡಿದನು.

ಈ ಸಂಗತಿಯು ಶಶಿಮುಖಿಯ ಕಿವಿಗೆ ಬೀಳಲು, ಅವಳು ಓಡುತ್ತೋಡುತ್ತ ಚಂದ್ರಕಾಂತನಲ್ಲಿಗೆ ಬಂದಳು. ವಲ್ಲಭರಾಯನೂ ಅವನಿಗೆ ನಾನಾ ಬಗೆಯಿಂದ ಹೇಳಲಾರಂಭಿಸಿದನು; ಇಷ್ಟೇ ಅಲ್ಲ, ‘ನಿನ್ನ ಮನೆಯ ಹೊಸ್ತಿಲವನ್ನೆಂದೂ ಮೆಟ್ಟಲಾರೆನೆ’ಂದು ಪಣತೊಟ್ಟಿದ್ದ ಮಾರ್ತಂಡರಾಯನು ಕೂಡ ಚಂದ್ರಕಾಂತನ ಮನೆಗೆ ಬಂದು:—“ನೀನು ಈ ಕಾರ್ತಿಕ ಶುದ್ಧ ಷಷ್ಠಿಯ ಶುಭ ದಿವಸದಲ್ಲಿ ನಿನ್ನ ಮನೆ ಬಿಟ್ಟು ಎಲ್ಲಿಗೂ ತೆರಳಕೂಡದೆಂದು ಪರಿಪರಿಯಿಂದ ತಿಳಿಸಿ ಹೇಳಿದನು; ಆದರೆ ಚಂದ್ರಕಾಂತನು ಅವರಾರ ಮಾತನ್ನೂ ಕೇಳಲಿಲ್ಲ.

ಮಧ್ಯಾಹ್ನ ಸಮಯಕ್ಕೆ ನೆರಮನೆಯ ವೃದ್ಧಳು-ಶಾರದೆಯ ಗೆಳತಿಯು-ಆಕಸ್ಮಿಕವಾಗಿ ಚಂದ್ರಕಾಂತನಲ್ಲಿಗೆ ಬಂದಳು. ಶಾರದೆಯು ಹೊರಟು ಹೋದಂದಿನಿಂದ ಅವಳು ಆ ಮನೆಗೆ ಬರುವದನ್ನೇ ಬಿಟ್ಟಿದ್ದಳು. ಅವಳನ್ನು ಕಂಡು ಚಂದ್ರಕಾಂತನು ಅನ್ನುತ್ತಾನೆ:—ಅಜ್ಜಿಯವರೇ, ಆಕಸ್ಮಿಕವಾಗಿ ಬಂದಿರಲ್ಲ?”

ಆ ವೃದ್ಧಳು ಆತನ ಪ್ರಶ್ನೆಗೆ ಉತ್ತರವನ್ನೀಯದೆ:—“ತಮ್ಮಾ, ಚಂದ್ರಕಾಂತಾ, ನೀನಿಂದು ವಿದೇಶಕ್ಕೆ ಹೊರಡುವೆಯಂತಲ್ಲ?”

ಚಂದ್ರಕಾಂತನು. —"ಅಹುದು, ಹೊರಡುವೆನು."

"ಪಶ್ಚಿಮ ದಿಕ್ಕಿನ ಕಡೆಗೆ ಹೊರಡುವೆಯಾ?"

"ಅಹುದು."

ಆ ಮುದುಕೆಯು ತುಸ ಹೊತ್ತು ಆಲೋಚಿಸಿ, ನಂತರ ಮೆಲ್ಲನೆ:— "ತಮ್ಮಾ, ಮತ್ತೆಲ್ಲಿಗಾದರೂ ಹೋಗಬೇಕಾಗಿದೆಯೇನು?"

ಚಂದ್ರಕಾಂತನು ಆ ಮುದುಕೆಯ ಅಭಿಪ್ರಾಯವನ್ನು ತಿಳಿದು:— 'ಇಲ್ಲ' ಎಂದು ಉತ್ತರ ಕೊಟ್ಟವನೇ ಚಂಚಲಚಿತ್ತನಾಗಿ ಅತ್ತಿತ್ತ ಅಡ್ಡಾಡ ಹತ್ತಿದನು.

ಆ ವೃದ್ಧಳು ಚಂದ್ರಕಾಂತನಿಗೆ ಯಾವ ಸಂಗತಿಯನ್ನು ಹೇಳ ಬಂದಿದ್ದಳೋ, ಅದನ್ನು ತಿಳಿಸಲಿಕ್ಕೆ ಅವಳಿಗೆ ಸಂಕೋಚವೆನಿಸುತ್ತಿತ್ತು-ಸಾಹಸವಾಗುತ್ತಿರಲಿಲ್ಲ. ಆದರೂ ಕೆಲ ಕ್ಷಣಗಳ ವರೆಗೆ ಸುಮ್ಮನಿದ್ದು, ನಂತರ ಅವಳು ಒಳ್ಳೇ ಸಾಹಸದಿಂದ:—"ತಮ್ಮಾ, ನೀನೊಂದು ಉಪಾಯವನ್ನು ಮಾಡಬಾರದೇ?" ಎಂದಳು. ಮುದುಕೆಯ ಆ ಮಾತಿನ ಅರ್ಥವು ಚಂದ್ರಕಾಂತನಿಗೆ ತಟ್ಟನೆ ಹೊಳೆಯಿತು. ಅದರಿಂದ ಅವನು ಆ ಮುದುಕೆಯ ಕಡೆಗೆ ಟಕಮಕನೆಂದು ನೋಡತೊಡಗಿದನು. ಆ ದೃಷ್ಟಿಮಿಲನದಿಂದ ಅವರಿಬ್ಬರ ಕಣ್ಣುಗಳಿಂದಲೂ ಕಂಬನಿಗಳು ಸುರಿಯಹತ್ತಿದವು. ಚಂದ್ರಕಾಂತನು ತನ್ನ ದುಃಖವನ್ನು ಆವರಿಸಿಕೊಂಡು, ಬೇರೆ ಕಡೆಗೆ ಮೋರೆದಿರುಹಿ:—"ಅಜ್ಜೀ, ಇದಕ್ಕೆ ಉಪಾಯವನ್ನೇನು ಮಾಡಹೇಳುವೆ?"

"ತಮ್ಮಾ, ಯೋಗ್ಯ ಉಪಾಯವಿದೆ; ಆದರೆ........"

ಚಂದ್ರಕಾಂತನು ಪುನಃ ಆಕೆಯ ಮೋರೆಯ ಕಡೆಗೆ ನೋಡುತ್ತ:— "ಆದರೆ ಎಂದರೇನು?"

ಆಗ ಆ ಮುದುಕೆಯು ತನ್ನ ಮನಸ್ಸಿನ ಸಂಕೋಚವನ್ನು ತೊರೆದು, ಸ್ಪಷ್ಟವಾಗಿ ಹೇಳಿದ್ದೇನಂದರೆ:--"ತಮ್ಮಾ, ನನ್ನ ನುಡಿಯನ್ನು ಕೇಳಿ ಸಿಟ್ಟಾಗಲಾರೆಯಷ್ಟೇ?"

ಚಂದ್ರಕಾಂತನು ಏನೊಂದೂ ಹೇಳದೆ, ಸುಮ್ಮನೆ ಆ ಮುದುಕೆಯ ಕಡೆಗೆ ನೋಡುತ್ತ ನಿಂತುಕೊಂಡನು.

ಆಗ ಆ ಮುದುಕೆಯು ಮೆತ್ತಗೆ:—"ತಮ್ಮಾ, ಆಕೆಗೆ ಕೆಲ ಹಣ-ಕಾಸನ್ನಾದರೂ ಕೊಟ್ಟು ಬಾ. ಸದ್ಯಕ್ಕೆ ಅವಳು ಒಬ್ಬಳೇ ಇದ್ದರೂ ಕೆಲ ದಿನಗಳಲ್ಲಿಯೇ ಆಕೆಗೆ.... "

ಚಂದ್ರಕಾಂತನು ಆ ಮುದುಕೆಯ ಮಾತನ್ನು ಕೇಳಿಯೂ ಕೇಳದಂತೆ ನಟಿಸಿ:—"ಅಜ್ಜೀ, ಕೆಲ ದಿನಗಳ ನಂತರ ಆಕೆಗೆ ಏನಾಗುವದೆಂದೀ?"

ಆಗ ಆ ಮುದುಕೆಯ ಕಣ್ಣೊಳಗಿಂದ ಧಾರೆಗಟ್ಟಿ ಅಶ್ರುಪ್ರವಾಹವುಂಟಾಯಿತು. ಅವಳು ಅದನ್ನು ಆಗಾಗ್ಗೆ ಒರೆಸಿಕೊಳ್ಳುತ್ತ:—"ಆಕೆಯು ಗರ್ಭದಿಂದ ಹುಟ್ಟಬಹುದಾದ ಬಾಲಕನು--ಆಕೆಯು ಇದು ವರೆಗೆ ಜೀವಂತಳಾಗಿದ್ದರೆ...."

ಆ ಮುದುಕೆಯ ಆ ಕಡೆಯ ವಾಕ್ಯವನ್ನು ಕೇಳಿ, ಚಂದ್ರಕಾಂತನು ಗದಗುಟ್ಟಿ ನಡುಗಿದನು. ಕೂಡಲೆ ಅವಸರದಿಂದ ಅವನು:—"ಅಜ್ಜೀ, ಇಂದು ಕಾರ್ತಿಕ ಶುದ್ಧ ಷಷ್ಠಿಯಲ್ಲವೆ?"

"ತಮ್ಮಾ, ಅಹುದು."

"ಇಂದು ಮನೆಯಿಂದ ಹೊರಡಬಾರದಲ್ಲವೆ?"

"ಹೊರಡಬಾರದೆಂದು ನಿನಗನಿಸುವದೇನು?"

"ಅಹುದು. ಹಾಗೆಯೇ ಅನಿಸಹತ್ತಿದೆ."

"ಹಾಗಾದರೆ ಅದರಂತೆಯೇ ಮಾಡು. ದುರ್ಗಾಪೂಜೆಯು ಮುಗಿದ ಬಳಿಕ ಬೇಕಾದಲ್ಲಿಗೆ ಹೋಗು. ಅದುವರೆಗೆ ಮನೆಯಲ್ಲಿಯೇ ಸ್ವಸ್ಥವಾಗಿರು."

ಏನೆನಿಸಿತೋ ಯಾರು ಬಲ್ಲರು? ಚಂದ್ರಕಾಂತನು ಅಂದು ಆ ಮುದುಕೆಯ ಮಾತಿಗೆ ಒಪ್ಪಿದನು.

ವಿಜಯಾದಶಮಿಯಾದನಂತರ ಒಂದು ದಿನ ಚಂದ್ರಕಾಂತನು ತನ್ನ ಮನೆಯ ಕಾರಭಾರಿಯನ್ನು ಕರೆದು:—"ಕಾರಭಾರಿಗಳೇ, ಕಾಶಿಯಲ್ಲಿ ಆಕೆಯನ್ನು ಬಿಟ್ಟು ಬರುವಾಗ ಹರಭಟ್ಟನೇನಾದರೂ ಹೇಳಿದನೇನು?"

"ಧಣಿಯರೇ, ಹರಭಟ್ಟರು ನನಗೆ ಭೆಟ್ಟಿಯೇ ಆಗಲಿಲ್ಲ."

ಚಂದ್ರಕಾಂತನು ಮನಸ್ಸಿನಲ್ಲಿ ಅಂಜಿ:-"ಭೆಟ್ಟಿಯಾಗಲಿಲ್ಲವೇ? ಹಾಗಾದರೆ ಅವಳನ್ನು ಯಾರ ಬಳಿಯಲ್ಲಿ ಬಿಟ್ಟು ಬಂದಿರಿ? ಅವಳ ತಾಯಿಯಾದರೂ ನಿಮಗೆ ಭೆಟ್ಟಿಯಾಗಿದ್ದಳೇ?"

ನಕಾರಾರ್ಥಕ ತಲೆಯನ್ನಲ್ಲಾಡಿಸುತ್ತ ಕಾರಭಾರಿಯು:—"ಇಲ್ಲ, ಆ ಮನೆಯಲ್ಲಿ ಆಗ ಯಾರೂ ಇರಲಿಲ್ಲ."

"ಯಾರೂ ಇರಲಿಲ್ಲವೇ? ಆ ಮನೆಯಲ್ಲಿ ಯಾರಾದರೂ ಇರುವರೋ-ಇಲ್ಲವೋ ಎಂಬದನ್ನಾದರೂ ಕೇಳಿ ತಿಳಿದಿದ್ದಿರಾ? ಹರಭಟ್ಟನು ಆ ಮನೆಯನ್ನು ತ್ಯಜಿಸಿ, ಬೇರೆ ಕಡೆಗೆ ಕೂಡ ಹೋಗಿರಬಲ್ಲನು."

"ಆ ಬಗ್ಗೆ ವಿಚಾರಿಸಿದೆನು. ಹರಭಟ್ಟನು ಅದೇ ಮನೆಯಲ್ಲಿರುತ್ತಾನೆಂದು ತಿಳಿಯಿತು."

ಚಂದ್ರಕಾಂತನು ಕೆಲಕ್ಷಣಗಳ ವರೆಗೆ ಸುಮ್ಮನಿದ್ದು, ನಂತರ ಒಂದು ಸಿಟ್ಟುಸಿರುಗರೆದು:—"ನೀವು ಇದು ವರೆಗೆ ಅಲ್ಲಿಗೆ ಎಷ್ಟು ಹಣ ಕಳಿಸಿರುವಿರಿ?"

"ನಾನು ಅಲ್ಲಿಗೆ ಹಣ-ಕಾಸುಗಳನ್ನೇನೂ ಕಳಿಸಿರುವದಿಲ್ಲ."

"ಕಳಿಸಿಲ್ಲವೆ?" ವಿಸ್ಮಯಚಕಿತನಾದ ಚಂದ್ರಕಾಂತನು ಹೀಗೆಂದು ಪ್ರಶ್ನೆ ಮಾಡಿದ ಕೂಡಲೆ ಕಾರಭಾರಿಯ ಮುಖವು ಬಿಳುಪೇರಿತು. ಆಗ ಚಂದ್ರಕಾಂತನು ಮತ್ತೆ:—"ಅವೇಕೆ ಕಳಿಸಲಿಲ್ಲ?" ಎಂದನು.

ಲಜ್ಜೆಯಿಂದ ಸತ್ತಂತಾದ ಕಾರಭಾರಿಯು:—"ಮಾವನವರು ತಿಂಗಳಿಗೆ ಐದು ರೂಪಾಯಿಗಳಂತೆ ಕಳಿಸಿದರೆ ಸಾಕೆಂದರು."

ಈ ಉತ್ತರವನ್ನು ಕೇಳಿಯಂತೂ ಚಂದ್ರಕಾಂತನು ಸಿಟ್ಟಿನಿಂದ ಉರಿಯ ಹತ್ತಿದನು. "ಐದು ರೂಪಾಯಿಗಳಂತೆಯೇ? ಅದೇಕೆ? ಇಲ್ಲಿಯ ಹಣವೇನು ಮಾವನ ಅಪ್ಪನ ಮನೆಯದೋ? ಪ್ರತಿ ತಿಂಗಳಿಗೆ ಐದುನೂರು ರೂಪಾಯಿಗಳನ್ನಾದರೂ ಕಳಿಸಿರಿ."

"ಒಳ್ಳೇದು" ಎಂದು ಹೇಳಿ, ಯಜಮಾನನ ಆಜ್ಞೆಯನ್ನು ಕೇಳಿ ಸ್ತಂಭಿತನಾದ ಕಾರಭಾರಿಯು ಅಲ್ಲಿಂದ ಮೆಲ್ಲನೆ ನುಸುಳಿದನು.

ಚಂದ್ರಕಾಂತನ ಆಜ್ಞೆಯನ್ನು ಕೇಳಿದ ಶಶಿಮುಖಿಯು ಕಾಕದೃಷ್ಟಿಯಿಂದ ಆತನ ಕಡೆಗೆ ನೋಡುತ್ತ:—"ಇವನಿಗೇನು ಹುಚ್ಚು ಹಿಡಿದಿದೆಯೇ!" ಎಂದೆನ್ನುತ್ತ, ಆ ಕಾರಭಾರಿಯ ಕಡೆಗೆ ಹೊರಳಿ, ಪಿಸಿಪಿಸಿ ಎಂದು ನಕ್ಕಳು. ಆಕೆಯ ಮಾತಿನ ಹೊಯಿಲೂ, ನಗೆಯ ನವಿಲೂ ಆ ಕಾರಭಾರಿಯ ಕರ್ಣರಂಧ್ರಗಳನ್ನೂ, ದೃಷ್ಟಿಪಥಗಳನ್ನೂ ಆಕರ್ಷಿಸಿಬಿಟ್ಟವು. ಕೆಲ ಕ್ಷಣಗಳ ನಂತರ ಶಶಿಮುಖಿಯು ತನ್ನ ನಗೆಯನ್ನು ತಡೆದು:—"ಕಾರಭಾರಿಗಳೇ, ಚಂದ್ರಕಾಂತನು ಎಷ್ಟು ಹಣ ಕಳಿಸಬೇಕೆಂದು ಹೇಳಿದನು?" ಎಂದು ಬೇಕಂತ ಕೇಳಿದಳು.

"ಪ್ರತಿ ತಿಂಗಳಿಗೆ ಐದುನೂರನ್ನಾದರೂ ಕಳಿಸಹೇಳಿರುತ್ತಾರೆ."

ಶಶಿಮುಖಿಯು ಮತ್ತೆ ವಿದ್ರೂಪದ ನಗುವನ್ನು ನಗಹತ್ತಿದಳು. ಹಾಗೆಯೇ ಎಷ್ಟೋ ಹೊತ್ತಿನ ವರೆಗೆ ನಕ್ಕು, ನಂತರ ಅವಳು ಗಂಭೀರಳಾಗಿ:—"ಅಯ್ಯೋ! ಸಿಟ್ಟಿನ ಭರದಲ್ಲಿ ನಮ್ಮ ಚಂದ್ರಕಾಂತನಿಗೆ ತಾನು ಏನು ಹೇಳುತ್ತೇನೆಂಬದರ ಅರಿವು ಕೂಡ ಉಳಿದಂತೆ ಕಾಣಲಿಲ್ಲ. ಈ ಎಲ್ಲ ಅನರ್ಥಕ್ಕೆ ಆ ಹತಭಾಗಿನಿಯೇ ಕಾರಣಳು! ನಾನು ಆಕೆಗೆ ಪ್ರತಿ ತಿಂಗಳಿಗೆ ಐದು ರೂಪಾಯಿ ಕಳಿಸ ಹೇಳಿದ್ದನ್ನು ಕೇಳಿ, ಅವನು ಅಷ್ಟೊಂದು ಸಿಟ್ಟಿಗೆದ್ದಿರುತ್ತಾನೆ. ಆ ಐದು ರೂಪಾಯಿಗಳನ್ನಾದರೂ ಏಕೆ ಕಳಿಸುವದೆಂದು ಆತನು ಮೊನ್ನೆ ನನಗೇ

ಸಿಟ್ಟು ಮಾಡಿದ್ದನು. ಕಾರಭಾರಿಗಳೇ, ತಿಳಿಯಿತೇನು ಆತನ ಮಾತಿನ ಇಂಗಿತವು? ಚಂದ್ರಕಾಂತನು ಅವಳಿಗೆ ಒಂದು ಕಾಸು ಕೂಡ ಕೊಡಬಾರದೆಂದು ಅನ್ನುತ್ತಾನೆ."

ಆ ಕಾರಭಾರಿಗೆ ಶಶಿಮುಖಿಯು ಅಂಬೋಣವು ಮೊದಮೊದಲು ಗ್ರಾಹ್ಯವೆನಿಸಲಿಲ್ಲ; ಆದರೆ ಆತನು ತನ್ನ ಮನಸ್ಸಿನಲ್ಲಿ ಹೆಚ್ಚು ಹೆಚ್ಚಾಗಿ ಹೇಗೆ ವಿಚಾರ ಮಾಡಹತ್ತಿದನೋ, ಹಾಗೆ ಆತನಿಗೆ ಶಶಿಮುಖಿಯು ಆ ಮಾತೇ ನಿಜವೆಂದು ಹೊಳೆಯಹತ್ತಿತು. "ಯಾವಳನ್ನು ನಿರರ್ಥಕವಾಗಿ ಮನೆಯಿಂದ ಹೊರಗೆ ಹಾಕಿರುವನೋ, ಅವಳಿಗೆ ಚಂದ್ರಕಾಂತನು ಪ್ರತಿ ತಿಂಗಳಿಗೆ ತಾನಾಗಿ ಐದನೂರು ರೂಪಾಯಿಗಳನ್ನು ಕಳಿಸುವ ಮನಸ್ಸುಳ್ಳವನಾಗಿರುವನೇ?" ಹೀಗೆ ವಿಚಾರಾಂತ್ಯದಲ್ಲಿ ಅವನಿಗನಿಸಲು, ಅವನು ಶಶಿಮುಖಿಯನ್ನು ಕೇಳಿದನು: "ಅಪ್ಪನವರೇ, ತಾವು ಈ ಬಗ್ಗೆ ಏನೆಂದು ಹೇಳುವಿರಿ?"

"ನಾನು ಮತ್ತೆ ಏನೆಂದು ಹೇಳಲಿ? ನಿಮಗೆ ಈ ಸಾಮಾನ್ಯವಾದ ಮಾತೂ ತಿಳಿಯದೇನು?"

ಆ ಕಾರಭಾರಿಯು ಮತ್ತಿಷ್ಟು ಗೊಂದಲದಲ್ಲಿ ಬಿದ್ದನು. ಅವನು ಆಕೆಗೆ ಏನಾದರೊಂದು ಹೇಳಿದರಾಯಿತೆಂದು ತಿಳಿದು:—"ಹಾಗೆಯೇ ಮಾಡುವೆನು" ಎಂದನು.

"ಹೌದು. ಹಾಗೆಯೇ ಮಾಡಿರಿ. ನೀವು ತಿಂಗಳಿಗೆ ಐದರಂತೆಯೇ ಕಳಿಸಿರಿ. ಚಂದ್ರಕಾಂತನು ತನ್ನ ಶಿಲ್ಕಿನಿಂದ ಕಳಿಸಲೊಪ್ಪದಿದ್ದರೆ, ನೀವು ನನ್ನ ಹಣದೊಳಗಿಂದ ಪ್ರತಿ ತಿಂಗಳಿಗೆ ಐದು ರೂಪಾಯಿಗಳಂತೆ ಕಳಿಸುತ್ತಿರಿ." ಚಂದ್ರಕಾಂತನು ತನ್ನ ಸೋದರತ್ತೆಯಾದ ಶಶಿಮುಖಿಗೆ ಪ್ರತಿ ತಿಂಗಳಿಗೆ ಐವತ್ತು ರೂಪಾಯಿಗಳ ನೇಮಣೂಕ ಮಾಡಿಕೊಟ್ಟಿದ್ದನು. ಅದರಿಂದ ಕಾರಭಾರಿಯು:—"ಹಾಗೆಯೇ ಆಗಲಿ"ಂದು ಹೇಳಿ, ಅಲ್ಲಿಂದ ಹೊರ ಹೊರಟನು.

ಅಷ್ಟರಲ್ಲಿ ಚಂದ್ರಕಾಂತನು ಪ್ರಯಾಗಕ್ಕೆ ಹೊರಟು ಹೋಗಿದ್ದನು ಶಾರದೆಗೆ ಹಣ ಕಳಿಸುವ ಬಗ್ಗೆ ಪತ್ರ ಮುಖದಿಂದ ಆತನ ಅಭಿಪ್ರಾಯವನ್ನು ಕೇಳಬೇಕೆಂದು ಕಾರಭಾರಿಯು ಮೊದಲು ಯೋಚಿಸಿದನು; ಆದರೆ ಆ ಮೇಲೆ ಈ ಬಗೆಯ ಅಸಂಭವ ಮಾತಿನ ಬಗ್ಗೆ ನಿರರ್ಥಕವಾಗಿ ಪೇಚಾಡುವದರಿಂದೇನು ಪ್ರಯೋಜನ? ಇದರಿಂದ ಚಂದ್ರಕಾಂತನಿಗೆ ತನ್ನ ಮಂದಬುದ್ಧಿಯು ಮಾತ್ರ ಚೆನ್ನಾಗಿ ತಿಳಿದು ಬರುವದೆಂದು ಸುಮ್ಮನಾದನು.

———

## ೧೧ನೇ ತರಂಗ:—ಇಷ್ಟೇ ಕೇಳಿದನೊ?-ಮತ್ತೇನೂ ಕೇಳಲಿಲ್ಲವೆ?

ಹಿಂದೆ ವರ್ಣಿಸಿದ ಸಂಗತಿಯು ನಡೆದು ಎರಡು ವರ್ಷಗಳು ಕಳೆದು ಹೋದುವು. ಆ ಎರಡು ವರ್ಷಗಳಲ್ಲಿ ಯಾವ ವಿಶೇಷ ಸಂಗತಿ ಘಟಿಸದಿದ್ದರೂ ಮಾಬಳಜ್ಜನ ಜೀವನದಲ್ಲಿ ಮಾತ್ರ ಹೆಚ್ಚಾದ ಪರಿವರ್ತನವುಂಟಾಗಿತ್ತು. ಯಾವ ದಿವಸ ಅವನ ಹೆಂಡತಿಯಾದ ಕಮಲಾಸುಂದರಿಯು ತೀರಿಕೊಂಡಿದ್ದಳೋ ಹಾಗು ಯಾವ ದಿವಸ ಆತನ ಏಕ ಮಾತ್ರ ಪುತ್ರಸಂತಾನವಾದ ಕಮಲಚರಣನು ಗತಿಸಿದ್ದನೋ, ಅಂದೇ ಅವನಿಗೆ ಈ ಇಡೀ ವಿಶ್ವವೇ ಕಣ್ಣು ಮುಚ್ಚಿಕೊಂಡಂತಾಗಿದ್ದಿತು; ಆದರೆ ಶಾರದೆಯ ಆ ಪುಟ್ಟ ಶಿಶುವು-ಆ ಕೇವಲ ವಿರಕ್ತನಂತಾಗಿದ್ದ ಮಾಬಳಜ್ಜನನ್ನು ಮತ್ತೆ ಆ ಸ್ನೇಹಮಯವಾದ ಸಂಸಾರದ ಇಕ್ಕಟ್ಟಿನ ದಾರಿಗೆ ತಂದು ಬಿಟ್ಟಿತ್ತು. ಆತನ ಕಣ್ಣುಗಳು ಆ ದಿನ ಬಹು ದಿವಸಗಳ ನಂತರ ಮತ್ತೆ ಅಶ್ರುಪೂರ್ಣವಾದವು. ಆಗ ಮಾಬಳಜ್ಜನು ಕಣ್ಣುಮುಚ್ಚಿಕೊಂಡು ಪರಮಾನಂದದಿಂದ:—"ನನ್ನ ಮನೆಯಲ್ಲಿ ವಿಶ್ವೇಶ್ವರನೇ ಉದಯನಾಗಿರುವನು!" ಎಂದನು.

ಆ ಶಿಶುವು ಇನ್ನೂ ಸಣ್ಣದಿತ್ತು. ಮಾಬಳಜ್ಜನು ಅದಕ್ಕೆ 'ವಿಸು' ಎಂದು ಕೂಗಿದರೆ ಅದು ಉತ್ತರ ಕೂಡ ಕೊಡಲಾರದಷ್ಟು ಚಿಕ್ಕದಾಗಿತ್ತು. ಆದರೂ ಮಾಬಳಜ್ಜನ ಕೂಗು ಕೇಳಿ ಅದು ಗಟ್ಟಿಗಟ್ಟಿಯಾಗಿ ನಗುತ್ತಿದ್ದಿತು ಮಾತ್ರ. ಆ ಮಗುವು ಇನ್ನೂ ಶಾರದೆಯು ಇಲ್ಲವೆ ಮಾಬಳಜ್ಜನ ಮನೆಯ ಒಕ್ಕಲಗಿತ್ತಿಯ ಕಂಕುಳವನ್ನು ಬಿಟ್ಟಿರುತ್ತಿದ್ದಿಲ್ಲ; ಆದರೆ ಎಂದಿನಿಂದ ಆ ಶಿಶುವು ತನ್ನ ಪುಟ್ಟ-ಪುಟ್ಟವಾದ ಹೆಜ್ಜೆಗಳನ್ನಿಕ್ಕ ಹತ್ತಿತೋ ಹಾಗು ಮನೆಯ ಹೊರಗೆ ಬರಹತ್ತಿತೋ, ಅಂದಿನಿಂದ ಅದು ಶಾರದೆಯು ಇಲ್ಲವೆ ಆಕೆಯ ದಾಸಿಯ ಕಡೆಗೆ ಹೋಗುವದನ್ನು ಬಿಟ್ಟು ಬಿಟ್ಟು, ಸದಾ ಸರ್ವಕಾಲದಲ್ಲಿ ಆ ವೃದ್ಧ ಮಾಬಳಜ್ಜನೊಡನೆಯೇ ಇರಹತ್ತಿತು. ಬೆಳಿಗ್ಗೆ ಎದ್ದ ಕೂಡಲೆ ಮಾಬಳಜ್ಜನು 'ವಿಸು, ಎಳು' ಎಂದಂದ ಕೂಡಲೆ ಆ ಶಿಶುವು 'ಅಜ್ಜಾ, ಎದ್ದೆನು' ಎಂದು ತೊದಲ್ನುಡಿಗಳಿಂದ ಹೇಳುತ್ತ, ಅವನ ಬಳಿಗೆ ಓಡುತ್ತ ಬರುತ್ತಿತ್ತು.

"ವಿಸು ಶಂಭುರಾಯರ ಮನೆಗೆ ಚದುರಂಗವಾಡಲಿಕ್ಕೆ ಹೋಗೋಣ ನಡೆ" ಎಂದು ಮಾಬಳಜ್ಜನು ಅಂದ ಕೂಡಲೆ, ಆ ಬಾಲಕನು: "ಅಜ್ಜಾ, ನಡೆ ಹಾಗಾದರೆ; ನಾವು ಅವರಿಗೊಂದು ಪ್ಯಾದೆ ಕೊಟ್ಟು ಬರುವಾ, ನಡೆ" ಎಂದಂದು, ಇದ್ದಲ್ಲಿಂದ ಚದುರಂಗದ ಗಂಟನ್ನೂ ಪಟವನ್ನೂ ಹುಡುಕಿಕೊಂಡು ಅಜ್ಜನನ್ನು ಎಳೆದೊಯ್ಯುತ್ತಿದ್ದನು! ಆ ಹುಡುಗನ ಆ ಉತ್ತರವನ್ನು

ಕೇಳಿ, ಮಾಬಳಜ್ಜನ ಕಂಠವು ಒತ್ತಿ ಬರುತ್ತಿತ್ತು. ಆಗ ಅವನು ಶಾರದೆಯನ್ನು ಕೂಗಿ ಕರೆದು:—"ತಂಗಿ, ನಮ್ಮ ವಿಶ್ವನಾಥನು ಚದುರಂಗದಾಟದಲ್ಲಿ ಒಳ್ಳೇ ನಿಪುಣ ಆಟಗಾರನಾಗುವನವ್ವಾ!" ಎಂದು ಬಹು ಹರ್ಷದಿಂದ ಹೇಳುವನು.

ಶಂಭುರಾಯರ ಮನೆಯ ಚದುರಂಗದಾಟದಲ್ಲಿ ವಿಶ್ವೇಶ್ವರನಿಗೂ ಒಂದು ನಿರ್ದಿಷ್ಟವಾದ ಸ್ಥಳವಿದ್ದಿತು. ವಿಶ್ವನಾಥನು ತನ್ನ ಅಜ್ಜನ ತೊಡೆಯ ಮೇಲೆ ಕುಳಿತು, ಗಂಭೀರಭಾವದಿಂದ ಚದುರಂಗದಾಟವನ್ನು ಏಕೋಪ್ರಕಾರವಾಗಿ ನೋಡುತ್ತಿದ್ದನು. ಆಗಿನ ಆತನ ಮುಖದ ಹಾವ-ಭಾವವಗಳನ್ನು ನೋಡಿದವರಿಗೆ, ಈ ಬಾಲಕನೇ ಚದುರಂಗದಾಟದ ಮುಖ್ಯಸ್ಥನಾಗಿರುವನೆಂಬಂತೆ ತೋರದಿರುತ್ತಿದ್ದಿಲ್ಲ.

ಆನೇಹಲ್ಲಿನಿಂದ ನಿರ್ಮಿಸಲ್ಪಟ್ಟ ಆ ಚದುರಂಗದ ಪ್ಯಾದೆ-ಬಾಜಿಗಳು ಮಾಬಳಜ್ಜನ ಆಟದ ಬಲದಿಂದ ಹೇಗೆ ಹೇಗೆ ನಿಹತವಾಗುವವೋ, ಹಾಗೆ ವಿಸುವು ಅವುಗಳನ್ನು ಒಳ್ಳೇ ಹುರುಪಿನಿಂದ ತನ್ನ ಕೈಯಲ್ಲಿ ಹಿಡಿದು ಹಚುಕುತ್ತಿದ್ದನು. ಮಾಬಳಜ್ಜನು ಚದುರಂಗದಾಟದಲ್ಲಿಯ ಬಿಳೇ ಬಣ್ಣದ ಬಾಜಿಗಳನ್ನೇ ಯಾವಾಗಲೂ ತನ್ನವಾಗಿಟ್ಟುಕೊಳ್ಳುತ್ತಿದ್ದನು. ಅದರಿಂದ ವಿರುದ್ಧ ಪಕ್ಷದವರು ಕೆಂಪುಬಣ್ಣದ ಬಾಜಿಗಳನ್ನೆಲ್ಲ ತಕ್ಕೊಳ್ಳಬೇಕಾಗುತ್ತಿತ್ತು. ವಿಶ್ವನಾಥನ ವಕ್ರದೃಷ್ಟಿಯು ಕೆಂಪು ಬಾಜಿಯ ವಜೀರನ ಮೇಲೆಯೇ ಹೆಚ್ಚಾಗಿರುತ್ತಿತ್ತು. ಎಲ್ಲಿಯ ವರೆಗೆ ಅದು ನಿಹತವಾಗಿ ತನ್ನ ಕೈ ಸೇರುತ್ತಿರಲಿಲ್ಲವೋ, ಅಲ್ಲಿಯವರೆಗೂ ಅವನು ಅದರ ಕಡೆಗೆ ಟಕಮುಕವಾಗಿ ನೋಡುತ್ತ ಕೂಡ್ರುತ್ತಿದ್ದನು. ಆ ಕೆಂಪುಬಣ್ಣದ ವಜೀರನು ಹಸ್ತಗತವಾಗಲಿಕ್ಕೆ ತಡವಾದರೆ, ವಿಶ್ವನಾಥನು ತನ್ನ ಅಜ್ಜನನ್ನು ಕುರಿತು:-"ಅಜ್ಜಾ, ಅಕೋ, ಅಲ್ಲಿನೆ ನೋಡು." ಎಂದು ಆಗಾಗ್ಗೆ ಸೂಚಿಸುತ್ತಿದ್ದನು.

ಈ ಬಗೆಯಾಗಿ ಮಾಬಳಜ್ಜನು ಹೊಸ ಹುರುಪಿನಲ್ಲಿ ಕಾಲಯಾಪನೆ ಮಾಡಹತ್ತಿದನು. ಈ ಪೂರ್ವದ ಆತನ ದುಃಖ-ಕಷ್ಟಗಳೆಲ್ಲ ವಿಸ್ಮರಣವಾಗಿ ಬಿಟ್ಟವು. ಮೊದಲಿನಂತೆ ಆತನು ಸದಾಸರ್ವಕಾಲದಲ್ಲಿ ಚದುರಂಗದಾಟದಲ್ಲಿಯೇ ತೊಡಗುತ್ತಿರಲಿಲ್ಲ. ಎಷ್ಟೋ ಹೊತ್ತಿನ ವರೆಗೆ ಆ ಚದುರಂಗಗಳು ಮನೆಯ ಒಂದು ಮೂಲೆಯಲ್ಲಿ ಬಿದ್ದುಕೊಂಡಿರಹತ್ತಿದವು. ಮೊದಲಿನಂತೆ ಬೆಳಗಿನ ಝಾವದಲ್ಲಿ ಶಂಭುರಾಯರ ಮನೆಗೆ ತಪ್ಪದೆ ಚದುರಂಗದಾಟಕ್ಕೆ ಹೋಗುವ ಅವನ ನಿಯಮವು ಸಡಿಲಾಯಿತು. ಮಧ್ಯಾಹ್ನ ಕಾಲದಲ್ಲಿ ಗಂಗಾಧರಪಂತರೊಡನೆ ಆಡುವದೂ ಅನಿಯಮಿತವಾಯಿತು. ಮುಕುಂದ ಭಟ್ಟರೊಡನಾಡುವ ಸಂಜೆಯಾಟವೂ ಬರಬರುತ್ತ ಕಟ್ಟಾಯಿತು. ಮುಕುಂದ

ಭಟ್ಟರು ತಾವಾಗಿ ಮಾಬಳಜ್ಜನ ಮನೆಗೆ ಬಂದು ಕರೆಕರೆದು ಬೇಸತ್ತರು. ಇತ್ತೀಚೆಗೆ ಮಾಬಳಜ್ಜನು ಬೇರೆ ಯಾರ ಮನೆಗೂ ಹೆಚ್ಚಾಗಿ ಹೋಗದಾದನು. ಆಟದ ಲಹರಿಯೇ ಹತ್ತಿದರೆ, ಪಟವನ್ನು ಹಾಸಿ, ವಿಶ್ವೇಶ್ವರನನ್ನು ಎದುರು ಬದಿಗೆ ಕೂಡ್ರಿಸಿ, ಎರಡೂ ಕಡೆಯ ಆಟವನ್ನು ತಾನೇ ಆಡುವದರಲ್ಲಿ ಮಗ್ನನಾಗುತ್ತಿದ್ದನು. ವಿಶ್ವನಾಥನಿಗೆ ತಿಳಿಯುಹತ್ತಿದ ಹಾಗೆ ಆತನಿಗೂ ಆ ಆಟದ ಚಟವು ಹತ್ತಿತು.

ಮಾಬಳಜ್ಜನು ವಿಶ್ವನಾಥನಿಗೆ:—“ತಮ್ಮಾ, ಕುದುರೆಯು ಎರಡೂವರೆ ಮನೆ ಹಾರುವದು” ಎಂದು ಹೇಳಿ ಕೊಡಲು, ವಿಶ್ವನಾಥನು ಅದನ್ನು ಚನ್ನಾಗಿ ಲಕ್ಷ್ಯದಲ್ಲಿಟ್ಟು, ನಂತರ:—“ಅಜ್ಜಾ, ಅಷ್ಟು ದೊಡ್ಡ ಕುದುರೆಯೇ ಎರಡೂವರೆ ಮನೆ ಹಾರಿದ ಬಳಿಕ, ಆಚೆಯ ಮನೆಯ ಆ ಪುಟ್ಟ ಆಕಳು ಎಷ್ಟು ಮನೆ ಹಾರುವದು?” ಎಂದು ಪ್ರಶ್ನೆ ಮಾಡಲು, ಮಾಬಳಜ್ಜನೂ ಶಾರದೆಯೂ ದಾಸಿಯೂ ಬಿದ್ದು ಬಿದ್ದು ನಗುವರು.

ಒಮ್ಮೆ ಮಾಬಳಜ್ಜನು ನೆರೆಮನೆಯಲ್ಲಾಗುವ ಹರಿಕೀರ್ತನಕ್ಕೆಂದು ಹೊರಟನು. ವಿಶ್ವನಾಥನೂ ತನ್ನ ಕೆಂಪು ಅಂಗಿಯನ್ನೂ, ಕರೇ ಟೊಪ್ಪಿಗೆಯನ್ನೂ, ಚಣ್ಣವನ್ನೂ ಹಾಕಿಕೊಂಡು ಓಡುತ್ತೋಡುತ್ತ ಬಂದು ಅಜ್ಜನ ಹೆಗಲೇರಿ ಕುಳಿತನು. ಮಾಬಳಜ್ಜನು ಅವನೊಡನೆ ಆ ಕೀರ್ತನಕ್ಕೆ ಹೊರಟನು. ಅಂದು ಅಲ್ಲಿ ಭರತನ ಆಖ್ಯಾನವು ನಡೆದಿತ್ತು. ಆ ವನವಾಸಿಯಾದ ಭರತನ ಕಂಕುಳದಲ್ಲಿದ್ದ ಆ ಪರದೇಶಿ ಹರಿಣಶಿಶುವಿನ ವಿಷಯವಾಗಿ ಕೀರ್ತನಕಾರನು ಒಳ್ಳೇ ಕಾರುಣ್ಯವಾಣಿಯಿಂದ ವರ್ಣಿಸುತ್ತಿರಲು, ಮಾಬಳಜ್ಜನು ದುಃಖಾತಿರೇಕದಿಂದ ತನ್ನ ಕಂಕುಳದಲ್ಲಿದ್ದ ಪುಟ್ಟ ವಿಶ್ವನಾಥನನ್ನು ಬಿಗಿದಪ್ಪಿ ಕೊಳ್ಳುತಲಿದ್ದನು.

ಬಳಿಕ ಕೀರ್ತನಕಾರನು ಆ ಮೃಗಶಿಶುವಿನ ಪ್ರಲೋಭನದ ಮೂಲಕ ಭರತರಾಜನಲ್ಲಿ ಎಷ್ಟು ವ್ಯಾಮೋಹವುಂಟಾಯಿತೆಂಬದನ್ನೂ, ಅದರಿಂದ ಆತನ ತಪಶ್ಚರ್ಯೆ, ಪೂಜೆ-ಪುನಸ್ಕಾರಗಳೆಲ್ಲ ಹೇಗೆ ಲೋಪವಾದವೆಂಬುದನ್ನೂ ಒಳ್ಳೇ ಮಾರ್ಮಿಕ ರೀತಿಯಿಂದ ನಿವೇದಿಸಿದನು. ಭರತರಾಜನು ಹರಿಣಶಿಶುವನ್ನು ತನ್ನ ತೊಡೆಯ ಮೇಲೆ ಮಲಗಿಸಿ, ಧ್ಯಾನಮಗ್ನನಾಗಲು, ಆತನ ಧ್ಯಾನದಲ್ಲಿ ಆ ಹರಿಣಶಿಶುವಿನ ಹೊರತು ಮತ್ತೆ ಯಾವ ಮೂರ್ತಿಯೂ ಬಾರದೆ, ತನ್ನ ಆ ಪ್ರೀತಿಯ ಹರಿಣಶಿಶುವು ವ್ಯಾಘ್ರನಿಂದ ಹಿಡಿಯಲ್ಪಡುತ್ತದೆಂಬಂತೆ ಗೋಚರವಾಗಲು, ಭರತರಾಜನ ಧ್ಯಾನವು ಭಂಗವಾಗಿ ಅವನು ತಟ್ಟನೆ ತನ್ನ ತೊಡೆಯ ಮೇಲೆ ಆ ಹರಿಣಶಿಶುವನ್ನು ಬಿಗಿದಪ್ಪಿ ಚುಂಬಿಸುವನು, ಮುಂ-

ತಾದ ಸಂಗತಿಗಳನ್ನು ಕೀರ್ತನಕಾರನು ಹೃದಯಂಗಮವಾಗಿ ವರ್ಣಿಸಲು, ಮಾಬಳಜ್ಜನ ಅಂತಃಕರಣವೂ ಕೇವಲ ಭರತರಾಜನಂತಾಗಿ ಆತನು ವಿಶ್ವನಾಥ ನನ್ನು ಬಿಗಿದಪ್ಪಿ ಮುದ್ದಿಸುವನು.

ಬರಬರುತ್ತ ಭರತರಾಜನಲ್ಲಿಯ ಆ ಹರಿಣಶಿಶುವು ದೊಡ್ಡದಾಗಿ ಅದು ಭರತನ ಕಂಕುಳವನ್ನು ಬಿಟ್ಟು ಪರ್ಣಕುಟೀರದ ಪ್ರಾಙ್ಗಣದಲ್ಲಿ ಅಡ್ಡಾಡಹತ್ತಿ ತೆಂಬದನ್ನೂ, ಪ್ರಾಙ್ಗಣವನ್ನು ಬಿಟ್ಟು ಪುಷ್ಪಕಾನನದಲ್ಲಿ ಸಂಚರಿಸಹತ್ತಿತೆಂಬ ದನ್ನೂ, ಅದಕ್ಕೂ ದೊಡ್ಡದಾಗಲು ಅದು ಅರಣ್ಯಪ್ರಾಂತದಲ್ಲಿ ಸ್ವೇಚ್ಛಾಚಾರ ದಿಂದ ತಿರುಗಹತ್ತಿತೆಂಬದನ್ನೂ ಕೀರ್ತನಕಾರನು ವರ್ಣಿಸಿ, ಒಮ್ಮೊಮ್ಮೆ ಆ ಹರಿಣಶಿಶುವು ವೇಳೆಗೆ ಸರಿಯಾಗಿ ಬಾರದಿರಲು, ಭರತರಾಜನು ಪರ್ಣಕುಟೀ ರದ ಬಾಗಿಲಲ್ಲಿ ನಿಂತು:—"ಬಾ, ಮಗೂ, ಬೇಗನೆ ಬಾ" ಎಂದು ಕೂಗಲು, ಆ ಶಿಶುವು ಇದ್ದಲ್ಲಿಂದ ಓಡಿಬರುತ್ತಿತ್ತೆಂಬದನ್ನೂ ವರ್ಣಿಸಿದನು. ಹೀಗೆ ಭರತ ರಾಜನ ಹಾಗು ಹರಿಣಶಿಶುವಿನ ನಿತ್ಯಕ್ರಮವು ನಡೆದಿರಲು, ಮುಂದೊಂದು ದಿನ ಅಡವಿಗೆಂದು ಹೋದ ಆ ಹರಿಣಶಿಶುವು ಭರತನೆಡೆಗೆ ಮರಳಿ ಬಾರದೆ ಆ ಅಡವಿಯ ಪಶುವು ಭರತರಾಜನ ಆ ಬಲವಾದ ಪ್ರೇಮರಜ್ಜುವನ್ನು ಛೇದಿಸಿ, ಅಡವಿಯನ್ನೇ ಸೇರಿಬಿಟ್ಟಿತೆಂದೂ, ವೃದ್ಧಭರತನು, "ಮಗೂ, ಬಾ, ಬೇಗನೆ ಬಾ; ನನ್ನ ಪ್ರೀತಿಯ ಶಿಶುವೇ ಬಾ" ಎಂದು ಹಲವು ವಿಧವಾಗಿ ಒಂದೇಸವನೆ ಕೂಗಿದರೂ ಅದು ಬರಲಿಲ್ಲವೆಂಬದನ್ನೂ, ಆಗ ಆ ಹರಿಣ ಶಿಶು ವಿನ ವ್ಯಾಮೋಹದಿಂದ ಬಳಲಿದ ಭರತನು ಆ ದೀರ್ಘವಾದ ಅರಣ್ಯದ ಪ್ರತಿ ಯೊಂದು ದರಿ-ಕಂದರಗಳನ್ನೂ ಗಿರಿ-ಗಹ್ವರವನ್ನೂ ಹುಡುಕುತ್ತ, ನಡು ನಡವೆ 'ಮಗೂ, ನನ್ನ ಪ್ರೀತಿಯ ಕಂದಾ, ಬೇಗನೆ ಬಾ, ನನ್ನನ್ನು ಬಿಗಿ ದಪ್ಪಿಕೋ' ಎಂದು ಬೇಕಾದಷ್ಟು ಕೂಗಿಕೊಂಡರೂ ಅದು ಬರಲೇ ಇಲ್ಲವೆಂಬ ದನ್ನೂ ಈ ಕರುಣಾಜನಕ ಸ್ಥಿತಿಯಲ್ಲಿ ಆ ಭರತರಾಜನು ಒಂದು, ಎರಡು, ನಾಲ್ಕು ದಿನಗಳನ್ನೂ ಹಾಗೆಯೇ ಕೆಲ ತಿಂಗಳು-ವರ್ಷಗಳನ್ನೂ ಕಳೆದರೂ ಆ ಹರಿಣಶಿಶುವು ತಿರುಗಿ ಬರಲಿಲ್ಲ. ಆದರೂ ಭರತರಾಜನಲ್ಲಿಯ ಆ ಹರಿಣ ಶಿಶು ವಿನ ವ್ಯಾಮೋಹವು ಕಡಿಮೆಯಾಗದೆ, ಅದು ದಿನದಿನಕ್ಕೆ ಹೆಚ್ಚಾಗಿ ಅವನು: "ಶಿಶುವೇ, ಬೇಗನೆ ಮರಳಿ ಬಾ" ಎಂಬ ವಾಕ್ಯವನ್ನೇ ನಿರಂತರವಾಗಿ ಜಪಿಸ ಲಾರಂಭಿಸಿದನು. ಹೀಗೆ ಆ ಭರತರಾಜನು ವ್ಯಾಮೋಹದಿಂದ ಅದೇ ಅವಸ್ಥೆ ಯಲ್ಲಿ ಗತಪ್ರಾಣನಾಗಲು, ಪುನರ್ಜನ್ಮದಲ್ಲಿ ಅವನು ಹರಿಣವಾಗಿಯೇ ಜನ್ಮ ಸಿದನೆಂದೂ, ಆದ್ದರಿಂದ ಮಾನವ ಪ್ರಾಣಿಯು ಯಾವ ಐಹಿಕವ್ಯಾಮೋಹ ದಲ್ಲಿಯೂ ತೊಡಗದೆ, ಸದಾಸರ್ವಕಾಲದಲ್ಲಿ ಆ ಏಕಮಾತ್ರ ಪರಬ್ರಹ್ಮನಲ್ಲಿ

ತನ್ನ ಚಿತ್ತವನ್ನು ನೆಟ್ಟಿರಬೇಕೆಂದೂ ಕೀರ್ತನಕಾರನು ಬಹು ಚೆನ್ನಾಗಿ ಹೇಳಿದನು.

ಕೀರ್ತನಕಾರನ ಆ ಸುಸ್ರಾವ್ಯವಾದ ಕೀರ್ತನವು ಮುಗಿದು, ಜನರು ತಮ್ಮ ತಮ್ಮ ಮನೆಗೆ ಹೊರಟು ಹೋದರು. ಮಾಬಳಜ್ಜನು ಮಾತ್ರ ಕಣ್ಣೀರುದುರಿಸುತ್ತ ಆ ಪುಟ್ಟ ವಿಶ್ವನಾಥನನ್ನು ತನ್ನ ಕಂಕುಳದಲ್ಲಿ ಒತ್ತಿ ಒತ್ತಿ ಹಿಡಿದು ಮುದ್ದಿಡುತ್ತ ಇನ್ನೂ ಅಲ್ಲಿಯೇ ಕುಳಿತನು.

ಆ ವೃದ್ಧ ಮಾಬಳಜ್ಜನ ಆ ಸ್ಥಿತಿಯು ಅಲ್ಲಿಯುವರಾರಿಗೂ ಅಸ್ವಾಭಾವಿಕವಾಗಿ ತೋರಲಿಲ್ಲ. ಯಾಕಂದರೆ, ವಯೋನುಗುಣವಾಗಿ ಅವರಲ್ಲಿಯು ಎಷ್ಟೋ ಜನರು ತಮ್ಮ ಪ್ರೀತಿಯ ಒಬ್ಬರಿಲ್ಲೊಬ್ಬರನ್ನು ಕಳಕೊಂಡವರೇ ಆದುದರಿಂದ, ಆ ಭರತನ ಆಖ್ಯಾನವನ್ನು ಕೇಳಿ, ಮಾಬಳಜ್ಜನ ಸ್ಥಿತಿಯನ್ನು ಕಂಡು ಪ್ರತಿಯೊಬ್ಬರ ಹೃದಯಗಳೂ ತಲ್ಲಣಗೊಂಡಿದ್ದವು.

ಬಹಳ ಹೊತ್ತಿನ ವರೆಗೆ ಒಂದೇ ಕಡೆಗೆ ಕುಳಿತ ಹುಡುಗರಿಗೆ ನಿದ್ದೆ ಬರುವದು ಸ್ವಾಭಾವಿಕವಷ್ಟೇ? ಅದರಂತೆ ತೂಕಡಿಸುತ್ತಿದ್ದ ವಿಶ್ವೇಶ್ವರನನ್ನು ಮಾಬಳಜ್ಜನು ಎತ್ತಿಕೊಂಡು:—"ತಮ್ಮಾ, ಮನೆಗೆ ಹೋಗೋಣ ನಡೆ; ರಾತ್ರಿಯಾಗಿದೆ" ಎಂದಂದು, ಮನೆಯ ಹಾದೀ ಹಿಡಿದನು.

ಮನೆಗೆ ಹೋದ ಕೂಡಲೆ ಮಾಬಳಜ್ಜನು ಎಂದೆನಂತೆ ವಿಶ್ವನಾಥನನ್ನು ತನ್ನ ಹಾಸುಗೆಯ ಮೇಲೆ ಮಲಗಿಸಿಕೊಳ್ಳದೆ, ಶಾರದೆಯ ಬಳಿಯಲ್ಲಿರಿಸಿ:— "ತಂಗೀ, ಇಗೋ, ನಿನ್ನ ಈ ಹುಡುಗನನ್ನು; ಈತನು ನಿನ್ನ ಬಳಿಯಲ್ಲಿಯೇ ಇರಲಿ!" ಎಂದಂದನು.

ಶಾರದೆಯು ಮಾಬಳಜ್ಜನ ಕಡೆಗೆ ಹೊರಳಿ ನೋಡಲು, ಆತನ ಕಣ್ಣುಗಳೊಳಗಿಂದ ಅಶ್ರುವರ್ಷಣವು ಒಂದೇಸವನೆ ಆಗುತ್ತಿತ್ತು. ಅದರಿಂದ ಅವಳು ಆಗ ಏನೂ ಮಾತಾಡದೆ ಸುಮ್ಮನಾದಳು.

೦ ೦ ೦ ೦ ೦

**ಕಳೆದ ಎರಡು ವರ್ಷಗಳಲ್ಲಿ ಚಂದ್ರಕಾಂತನು ತನ್ನ ಊರಿಗೆ ಹೋಗಿರಲಿಲ್ಲ. ಹಣವು ಬೇಕಾದಾಗ ಮಾತ್ರ ತನ್ನ ಕಾರಭಾರಿಗೆ ಪತ್ರ ಬರೆಯುತ್ತಿದ್ದನು. ಆ ಕೂಡಲೆ ಕಾರಭಾರಿಯು ಆತನ ವಿಲಾಸಕ್ಕೆ ಅವನು ಬೇಡಿದಷ್ಟು ಹಣ ಕಳಿಸುತ್ತಿದ್ದನು.**

**ದುಃಖಾಕ್ರಾಂತಳಾದ ಶಶಿಮುಖಿಯು ಚಂದ್ರಕಾಂತನಿಗೆ ಆಗಾಗ್ಗೆ ಪತ್ರ ಬರೆಯುತ್ತಿದ್ದಳು. ಬೇಗನೆ ಹೊರಟು ಬರಬೇಕೆಂದು ವಲ್ಲಭರಾಯನೂ**

ಆಗ್ರಹಪೂರ್ವಕವಾಗಿ ಬರೆಯುತ್ತಿದ್ದನು. ಮಾರ್ತಂಡರಾಯನೂ ಒಂದೆರಡು ಸಾರೆ ಪತ್ರ ಬರೆದು: "ನಾನು ಬೇನೆಯಿಂದ ಬಳಲುತ್ತಿರುವೆನು; ಒಮ್ಮೆ ನಿನ್ನನ್ನು ಭೆಟ್ಟಿಯಾಗುವ ಇಚ್ಛೆಯಾಗಿದೆ" ಹೀಗೆಂದು ತಿಳಿಸಿದ್ದನು.

ಮೊದಮೊದಲು ಚಂದ್ರಕಾಂತನು ಯಾವ ಪತ್ರಗಳಿಗೂ ಹೆಚ್ಚು ಲಕ್ಷ್ಯಗೊಡುತ್ತಿರಲಿಲ್ಲ; ಆದರೆ ತಮ್ಮ ನೆರಮನೆಯ ಆ ವೃದ್ಧ-ಶಾರದೆಯ ಗೆಳತಿಯ-ಒಂದು ಪತ್ರಮೊಳಗಿನ "ಈ ಪತ್ರ ತಲಪುತ್ತಲೇ ಹೊರಟು ಬಾ; ನಿನಗೆ ಬಹು ಮಹತ್ವದ ಗುಪ್ತ ಸಂಗತಿಯನ್ನು ತಿಳಿಸಬೇಕಾಗಿದೆ" ಎಂಬೀ ವಾಕ್ಯವನ್ನು ಓದಿದ ಕೂಡಲೆ, ಆತನು ತನ್ನ ಗಂಟು-ಗದಡಿಗಳನ್ನೆಲ್ಲ ಕಟ್ಟಿ, ತನ್ನೂರಿನ ತಿಕೀಟು ಕೊಂಡುಕೊಂಡು ಗಾಡಿಯನ್ನೇರಿದನು.

ಆ ಮುದುಕಿಯು ಅವನಿಗೆ ಅಂಥ ಯಾವ ಮಹತ್ವದ ಸಂಗತಿಯನ್ನೂ ತಿಳಿಸುವ ಸಂಭವವಿರಲಿಲ್ಲ; ಆದರೂ ಅವಳ ಪತ್ರ ತಲುಪುತ್ತಲೆ ಅವನು ಇದ್ದಲ್ಲಿಂದ ತನ್ನ ಮನೆಗೆ ಧಾವಿಸಿ ಬಂದನು; ಆದರೆ ಅವನು ಅಷ್ಟು ಧಾವಿಸುತ್ತ ಬಂದಂತೆ, ಮನೆಗೆ ಬಂದ ಮೇಲೆ ಅವನಿಗೆ ಯಾವ ಫಲವೂ ದೊರೆಯಲಿಲ್ಲ. ಆ ಮುದುಕಿಯನ್ನು ಕಂಡು:—"ಅಜ್ಜೀ, ಮತ್ತೇನು ವರ್ತಮಾನ?" ಎಂದು ಚಂದ್ರಕಾಂತನು ಒಳ್ಳೇ ಆಸ್ಥೆಯಿಂದ ಕೇಳಲು, ಅವಳು:—"ವಿಶೇಷವೇನೂ ಇಲ್ಲ!" ಎಂದಂದಳು.

ನಿರಾಶಾಗ್ರಸ್ತನಾದ ಚಂದ್ರಕಾಂತನು ಆಕೆಯನ್ನು ಕುರಿತು ಮತ್ತೆ:—"ಹಾಗಾದರೆ ಮನೆಗೆ ಬರಬೇಕೆಂದು ಸುಮ್ಮನೆ ತೊಂದರೆಯನ್ನೇಕೆ ಕೊಟ್ಟೆ?"

"ನೀನು ಮನೆಯಲ್ಲಿರದಿದ್ದರೆ ಚಂದ ಕಾಣುವದೇ?" ಎಂದಂದು, ಆ ಮುದುಕಿಯು ನಿಟ್ಟುಸಿರುಗರೆದು, ಚಂದ್ರಕಾಂತನನ್ನು ಕುರಿತು ಮತ್ತೆ:—"ಅಪ್ಪಾ, ಏನಾಗಬೇಕಾಗಿತ್ತೋ ಅದು ಆಗಿಹೋಗಿದೆ. ನೀನಿನ್ನು ಸಂಸಾರಿಯಾಗದಿದ್ದರೆ, ನಮ್ಮ ದುಃಖ ನಿವಾರಣವಾಗಲಿಕ್ಕಿಲ್ಲ."

ಚಂದ್ರಕಾಂತನು ವಿರಕ್ತಭಾವದಿಂದ ಬೇರೆ ಕಡೆಗೆ ನೋಡದಿರುವಿ:—"ಅದಕ್ಕೆ ನಾನೇನು ಮಾಡಲಿ?" ಎಂದಂದು ಕಿವಿಜಾಡಿಸಿದನು.

ಚಂದ್ರಕಾಂತನ ಈ ಉತ್ತರವನ್ನು ಕೇಳಿ ಮಾರ್ತಂಡರಾಯನು ಸುಮ್ಮನಾಗಲಿಲ್ಲ. ಚಂದ್ರಕಾಂತನ ಮುಂಗೈ ಹಿಡಿದು:—"ತಮ್ಮಾ, ನನ್ನನ್ನು ಕ್ಷಮಿಸು. ಅಂದಿನಿಂದ ನಾನು ನನ್ನ ಅಂತರಂಗದಲ್ಲಿ ಎಂಥ ವ್ಯಥೆಗೀಡಾಗಿರುವೆನೆಂಬದನ್ನು ಆ ಸರ್ವಾಂತರ್ಯಾಮಿಯಾದ ಜಗದೀಶನೇ ಬಲ್ಲನು!" ಎಂದನು.

ಅದನ್ನು ಕೇಳಿ ಚಂದ್ರಕಾಂತನಿಗೆ ಬಹು ಕೆಡಕೆನಿಸಿತು. ಆದರೂ ಆಗ ಆತನ ಬಾಯಿಂದ ಯಾವ ಶಬ್ದಗಳೂ ಹೊರಬೀಳಲಿಲ್ಲ.

ಆಗ ಮಾರ್ತಂಡರಾಯನು ಮತ್ತೆ ಹೇಳತೊಡಗಿದನೇನಂದರೆ:—"ತಮ್ಮಾ, ಮತ್ತೊಂದು ಲಗ್ನ ಮಾಡಿಕೊಂಡು ಸಂಸಾರಧರ್ಮವನ್ನು ಪರಿಪಾಲಿಸು. ನಾನು ನಿನಗೆ ತಕ್ಕವಳಾದ ಕನ್ಯೆಯನ್ನು ಗೊತ್ತುಮಾಡಿಟ್ಟಿರುವೆನು; ಕೇವಲ ನಿನ್ನ ಅಭಿಪ್ರಾಯ ತಿಳಿಯುವ ಸಲುವಾಗಿ ಇನ್ನೂ ಅವರಿಗೆ ವಚನವನ್ನಿತ್ತಿಲ್ಲ. ತಮ್ಮಾ, ಒಬ್ಬ ಹೆಂಡತಿಯು ಗತಿಸಿದರೆ, ಜನರು ಎರಡನೆಯ ಲಗ್ನ ಮಾಡಿಕೊಳ್ಳುವದಿಲ್ಲವೇ?"

ಚಂದ್ರಕಾಂತನು ಮೆಲ್ಲನೆ:—"ನನ್ನ ಹೆಂಡತಿಯು ಗತಿಸಿಹೋದಳೆಂಬ ಸಂಗತಿಯು ನಿಮಗೆ ತಿಳಿದಿದೆಯೇನು?"

"ದೇವಾ! ದೇವಾ! ಹೀಗೆ ನುಡಿಯಬಾರದಪ್ಪಾ!!"

ಚಂದ್ರಕಾಂತನು ಸುಮ್ಮನೆ ನಿಂತುಕೊಂಡನು.

ಆಗ ಮಾರ್ತಂಡರಾಯನು ಅಳುತ್ತಳುತ್ತ:—"ತಮ್ಮಾ, ನಾನೇ-ನಾನೇ ನಿನ್ನನ್ನು ಬಾಳುವೆಗೇಡು ಮಾಡಿದವನೆಂದು ನನಗೆ ಆಗಾಗ್ಗೆ ಅನಿಸುತ್ತದೆ. ಈ ದುಃಖದಿಂದ ನನಗೆ ಇತ್ತೀಚೆಗೆ ನಿದ್ದೆ ಕೂಡ ಹತ್ತದಾಗಿದೆ."

ಚಂದ್ರಕಾಂತನು ಎಷ್ಟೋ ಹೊತ್ತಿನವರೆಗೆ ಯೋಚಿಸಿ, ಬಳಿಕ ಮೆಲ್ಲನೆ: "ತಾವು ನನ್ನ ದ್ವಿತೀಯ ಸಂಬಂಧವನ್ನು ಅದೆಲ್ಲಿ ಗೊತ್ತು ಮಾಡಿರುತ್ತೀರಿ?"

ಮಾರ್ತಂಡರಾಯನು ಕಣ್ಣುಗಳನ್ನೊರೆಸಿಕೊಳ್ಳುತ್ತ ಸರಿಯಾಗಿ ಕುಳಿತು:—"ಕಲ್ಕತ್ತೆಯಲ್ಲಿ; ನೀನೊಮ್ಮೆ ಅಲ್ಲಿಗೆ ಸ್ವತಃ ಹೋಗಿ ನೋಡಿಕೊಂಡು ಬಾ."

"ಹಾಗಾದರೆ ನಾಳೆಯೇ ಹೊರಡುತ್ತೇನೆ."

ಚಂದ್ರಕಾಂತನ ಆ ಅಭಯವಾಣಿಯನ್ನು ಕೇಳಿ, ಮಾರ್ತಂಡರಾಯನು ಅವನನ್ನು ಚೆನ್ನಾಗಿ ಹರಸಿ:—"ತಮ್ಮಾ, ಹಾಗೆಯೇ ಮಾಡು; ಹಾಗು ನಿನ್ನ ಮನಸ್ಸಿಗೆ ಬಂದರೆ ಕೂಡಲೆ ನನಗೆ ಪತ್ರ ಬರೆ. ಬಳಿಕ ನಾನು ನನ್ನ ಮನೆಯವರೊಡನೆ ಕಲ್ಕತ್ತೆಗೆ ಹೋಗಿ ನಿಶ್ಚಯ ಮಾಡುವೆನು" ಎಂದಂದು, ಕೆಲಕ್ಷಣಗಳ ವರೆಗೆ ಸುಮ್ಮನಿದ್ದು, ಮತ್ತೆ:—"ತಮ್ಮಾ, ಚಂದ್ರಕಾಂತಾ, ಈ ನಿನ್ನ ಮಾರ್ತಂಡಕಕ್ಕನು ಇನ್ನು ಈ ಲೋಕದಲ್ಲಿ ಹೆಚ್ಚು ದಿನಗಳ ವರೆಗೆ ಬದುಕಿರುವ ಆಶೆಯಿಲ್ಲ. ಅಷ್ಟರೊಳಗೆ ನೀನು ಸಂಸಾರಿಯಾಗಿ ಸುಖಿಯಾದದ್ದನ್ನು ನೋಡಬೇಕೆಂದು ಬಯಸುತ್ತೇನೆ" ಎಂದು ಗದ್ಗದ ಕಂಠದಿಂದ ಹೇಳಿದನು.

ಚಂದ್ರಕಾಂತನು ಮರುದಿನ ಕಲ್ಕತ್ತೆಗೆ ಹೊರಟನು. ಆತನೊಡನೆ ಆತನ ಮಾವನಾದ ವಲ್ಲಭರಾಯನೂ ಹೊರಟಿದ್ದನು. ಕನ್ಯೆಯನ್ನು

ನೋಡುವ ಶಾಸ್ತ್ರವು ಬಗೆಹರಿಯಿತು. ಆ ಕನ್ಯೆಯನ್ನು ಕಂಡು:—"ಈಕೆಯು ಲಕ್ಷ್ಮೀದೇವಿಯಂತೆ ಸುಲಕ್ಷಣೆಯಾಗಿರುತ್ತಾಳೆ"ಂದು ಆ ವೃದ್ಧ ವಲ್ಲಭ ರಾಯನು ಬಣ್ಣಿಸಿದನು.

ಅದನ್ನು ಕೇಳಿ ಚಂದ್ರಕಾಂತನು ಮೋರೆದಿರುವಿದನು ಮಾತ್ರ! ತನ್ನ ಅಭಿಪ್ರಾಯವೊಂದನ್ನೂ ಬಾಯಿಬಿಚ್ಚಿ ಒಡಸುಡಿಯಲಿಲ್ಲ. ಸ್ಟೇಶನ್ನಿಗೆ ಬಂದು ತಿಕೇಟು ತಕ್ಕೊಂಡು ಇಬ್ಬರೂ ಗಾಡಿಯನ್ನೇರಿದರು. ಆಗ ವಲ್ಲಭ ರಾಯನು ಚಂದ್ರಕಾಂತನನ್ನು ಕುರಿತು:—"ಹಾಗಾದರೆ ತಮ್ಮಾ, ಈ ಹುಡುಗೆಯು ಆಗಬಹುದೆ?" ಎಂದು ಪ್ರಶ್ನೆ ಮಾಡಲು,

ಚಂದ್ರಕಾಂತನು ಅಸಮ್ಮತಿಯ ಗೋಣು ಅಲ್ಲಾಡಿಸುತ್ತ:—"ಬೇಡ" ಎಂದನು.

ಆ ಉತ್ತರವನ್ನು ಕೇಳಿ ವಲ್ಲಭರಾಯನ ತಲೆಯ ಮೇಲೆ ಸಿಡಿಲೇ ಬಿದ್ದಂತಾಯಿತು. "ಇಂಥ ಸುಂದರ ಉಪವರಳಾದ ಕನ್ಯೆಯೂ ನಿನ್ನ ಮನಸ್ಸಿಗೆ ಬರಲಿಲ್ಲವೇ?" ಎಂದು ಆತನು ಕೇಳಲು,

"ಇಲ್ಲ-ಇಲ್ಲ" ಎಂದು ಚಂದ್ರಕಾಂತನಿಂದ ಪ್ರತ್ಯುತ್ತರ ಬಂತು. "ಶಾರದೆಗಿಂತಲೂ ಇವಳು ಚೆನ್ನಾಗಿಲ್ಲವೆ?" ಎಂದು ವಲ್ಲಭರಾಯನು ಮನಸ್ಸಿನೊಳಗೇ ಅಂದುಕೊಂಡು ಸುಮ್ಮನಾದನು.

ಇಷ್ಟರಲ್ಲಿ ಅವರಿಳಿಯುವ ನಿರ್ದಿಷ್ಟವಾದ ಸ್ಟೇಶನ್ನು ಬಂತು. ವಲ್ಲಭ ರಾಯನು ಗಾಡಿಯಿಂದಿಳಿದನು. ಚಂದ್ರಕಾಂತನು ಈ ಮೊದಲೇ ಪ್ರಯಾಗದ ತಿಕೇಟು ಕೊಂಡುಕೊಂಡದ್ದರಿಂದ ಅವನಿಳಿಯಲಿಲ್ಲ.

ಆಗ ವಲ್ಲಭರಾಯನು ಅನ್ನುತ್ತಾನೆ:-"ತಮ್ಮಾ, ನೀನು ಇನ್ನೂ ಎಷ್ಟು ದಿನಗಳ ವರೆಗೆ ಹೀಗೆಯೇ ತಿರುಗಾಡತಕ್ಕವನು?"

"ಕಕ್ಕನಿಗೆ ನಮಸ್ಕಾರವನ್ನು ಹೇಳು; ಮತ್ತು ಬೇಗನೆ ತಿರುಗಿ ಬರುವ ಇಚ್ಛೆಯಿಲ್ಲೆಂಬದನ್ನು ತಿಳಿಸು." ಚಂದ್ರಕಾಂತನು ಹೇಳಿದನು.

ಆ ಸಂಗತಿಯನ್ನು ಕೇಳಿ, ಮಾರ್ತಂಡರಾಯನು ಹಣೆ-ಹಣೆ ಬಡೆದುಕೊಳ್ಳುತ್ತ:—"ಏನಾಯಿತಿದು? ನಾನು ಆರೋಗ್ಯದಿಂದಿದ್ದರೆ, ನಾನೇ ಹೋಗಿ ಶಾರದೆಯನ್ನು ಕರೆ ತರುತ್ತಿದ್ದೆನು. ಸಮಾಜದ ಪೊಳ್ಳು ಬೆದರಿಕೆಗೆ ಅಂಜಿ, ಹೀಗೆ ಚಿರಕಾಲದ ವರೆಗೆ ನರಕದಲ್ಲಿ ಕೊಳೆಯುತ್ತಿದ್ದಿಲ್ಲ. ಸಮಾಜದ ಬೆದರಿಕೆಯೆಂದರೇನು? ನನ್ನ ಸ್ವಂತದ ನೀಚತನವೇ ಇದಾಗಿದೆ!"

ಮಾರ್ತಂಡರಾಯನ ಈ ಪ್ರಲಾಪವನ್ನು ಕೇಳಿ ಶಶಿಮುಖಿಯು ಹಲ್ಲು ಕಡಿಯುತ್ತ:—"ಸಾಯುವ ಮುಳನಿಗೆ ಬುದ್ಧಿಭ್ರಂಶವಾದಂತಾಗಿದೆ!" ಎಂದು

ಕೊಂಡು, ಚಂದ್ರಕಾಂತನ ಕಾರಭಾರಿಯನ್ನು ಕರೆದು:—"ಚಂದ್ರಕಾಂತನು ಏನೆಂದು ಕೇಳಿದನು?"

"ಕಾಶಿಗೆ ಇದುವರೆಗೆ ಎಷ್ಟು ಹಣ ಕಳಿಸಿರುವಿರೆ"ಂದು.

'ಇಷ್ಟೇ ಕೇಳಿದನೇ; ಮತ್ತೇನೂ ಕೇಳಲಿಲ್ಲವೆ?' ಎಂದೆನ್ನುತ್ತ, ಉಪಹಾಸದ ನಗೆ ನಗುತ್ತ ಶಶಿಮುಖಿಯು ಹೊರಟು ಹೋದಳು.

---

## ೧೧ನೇ ತರಂಗ:—ಮತ್ತಿವರಾರವ್ವ?

ಚಂದ್ರಕಾಂತನು ಪ್ರಯಾಗದ ತಿಕೇಟನ್ನೇನೋ ಕೊಂಡುಕೊಂಡಿದ್ದನು; ಆದರೆ ದಾರಿಯಲ್ಲಿ ಆಕಸ್ಮಿಕವಾಗಿ ಆತನ ಆ ಸಂಕಲ್ಪವು ಪರಿವರ್ತನ ಹೊಂದಿತು. ಅವನು ನಡುವೆ ಕಾಶಿಯಲ್ಲಿಯೇ ಇಳಿದುಬಿಟ್ಟನು.

ಆತನೊಡನಿದ್ದ ಆತನ ಇಬ್ಬರು ಆಳುಗಳು ಬಾಡಿಗೆಯ ರಥವನ್ನು ಗೊತ್ತು ಮಾಡಿ, ತಮ್ಮ ಸಾಮಾನುಗಳನ್ನೆಲ್ಲ ಹೇರಿದನು; ಆದರೆ ಚಂದ್ರಕಾಂತನು ಮಾತ್ರ ಆ ರಥವನ್ನು ಏರಲಿಲ್ಲ. ತನ್ನ ಆಳುಗಳಿಗೆ ಪೋಷ್ಟಮನ್ನನ ಮಾರ್ಗ ನಿರೀಕ್ಷಿಸ ಹೇಳಿ, ತಾನು ಕಾಲು ನಡಿಗೆಯಿಂದಲೇ ಬೇರೆ ಮಾರ್ಗದಿಂದ ಸಾಗಿದನು. ದಾರಿ ನಡೆಯ ಹತ್ತಿದ ಬಳಿಕ ಅವನಿಗೆ ದುಃಖದ ಭರತಿಯುಂಟಾಗಹತ್ತಿತು. ಆದರಿಂದ ಆತನ ಮುಖವು ಬಾಡಿತು, ಗಂಟಲಾರಿತು, ತನ್ನ ಎದೆಯ ಮೇಲೆ ತಾನೇ ತುಳಿಯುತ್ತ ನಡೆಯುತ್ತಿರುವ ಹಾಗೆ ಆತನಿಗೆ ಭಾಸವಾಯಿತು. ಅದರಿಂದ ಅವನ ಕಾಲುಗಳೇ ಏಳದಾದವು. ಆದರೂ ಆತನು ನಡುವೆ ಎಲ್ಲಿಯೂ ನಿಲ್ಲದೆ, ಒಂದೇಸವನೆ ದಾರಿ ತುಳಿಯುತ್ತಿದ್ದನು. ಬರಬರುತ್ತ ಅವನಿಗೆ ಹರಭಟ್ಟನ ಮನೆಯು ಸಮೀಪಿಸಿತು. ಹರಭಟ್ಟನ ಮನೆಯ ಅಕ್ಕಪಕ್ಕದ ಪ್ರದೇಶಗಳೆಲ್ಲವೂ ಅವನಿಗೆ ಚೆನ್ನಾಗಿ ಪರಿಚಿತವಿದ್ದವು. ಹರಭಟ್ಟನ ಮನೆಯ ಓಣಿಯೊಳಗಿನ ಕೂಟಿನಲ್ಲಿಯ ಅಂಗಡಿಕಾರನು ತನ್ನ ನಿತ್ಯಕ್ರಮದಂತೆ ಕೊಳಲನ್ನೂದುತ್ತ ಗಿರಾಕಿಗಳ ನಿರೀಕ್ಷಣೆ ಮಾಡುತಲಿದ್ದನು. ಚಂದ್ರಕಾಂತನು ಆ ಅಂಗಡಿಕಾರನೆದುರಿಗೆ ಹೋಗಿ ನಿಂತುಕೊಳ್ಳಲು, ಸಾಹೇಬೀ ಠೀವಿಯ ಚಂದ್ರಕಾಂತನನ್ನು ಕಂಡು, ಅವನು ಕೆಲಕ್ಷಣಗಳ ವರೆಗೆ ತನ್ನ ಕೊಳಲನ್ನು ನಿಲ್ಲಿಸಿ, 'ಈ ಸಾಹೇಬನು ಕೊಳ್ಳತಕ್ಕ ಯಾವ ಸಾಮಾನುಗಳೂ ನನ್ನ ಅಂಗಡಿಯಲ್ಲಿಲ್ಲವಲ್ಲ!' ಎಂದು ಯೋಚಿಸಿ, ಮತ್ತೆ ಕೊಳಲನ್ನೂದಲಿಕ್ಕೆ ಪ್ರಾರಂಭಿಸಿದನು.

ಚಂದ್ರಕಾಂತನೂ ಅಲ್ಲಿಂದ ಮುಂದೆ ನಡೆದನು. ಆ ಗಲ್ಲಿಯಲ್ಲಿ ಹೊಕ್ಕ ಬಳಿಕಂತೂ ಚಂದ್ರಕಾಂತನ ನಡಿಗೆಯು ತೀರ ಮಂದವಾಯಿತು. ಕಾಶೀ

ಕ್ಷೇತ್ರದ ಆ ತೀರ ಇಕ್ಕಟ್ಟಾದ ಗಲ್ಲಿಗಳಲ್ಲಿ ಗಾಳಿಯ ಸುಳಿವು ತೀರ ಕಡಿಮೆ. ಅದರಿಂದ ದಣಿದ ಹಾಗು ದುಃಖಾಕುಲನಾದ ಚಂದ್ರಕಾಂತನ ಶ್ವಾಸಪ್ರಶ್ವಾಸಗಳಿಗೆ ಕೂಡ ತೊಂದೆರೆಯುಂಟಾಯಿತು. ಅವನು ಒಂದೆರಡು ಹೆಜ್ಜೆ ಇಕ್ಕಿದವನೇ 'ಹಾ!' ಎಂದು ನಿಲ್ಲುವನು; ಮತ್ತೆ ನಡೆಯುವನು; ಮತ್ತೆ ನಿಲ್ಲುವನು. ಅವನಿಂದ ಅತ್ಯಲ್ಪವಾಗಿ ಉಳಿದಿರುವ ಆ ದಾರಿಯನ್ನು ಕ್ರಮಿಸುವದಾಗದಾಯಿತು. ಹೇಗಾದರೊಮ್ಮೆ ಹೋಗಿ ಅವನು ಆ ಹರಭಟ್ಟನ ಮನೆಯ ಎದುರಿಗೆ ನಿಂತುಕೊಂಡನು. ಅಲ್ಲಿ ಆತನು ಎಷ್ಟೋ ಹೊತ್ತಿನ ವರೆಗೆ ಸುಮ್ಮನೆ ನಿಂತುಕೊಂಡನು ಮಾತ್ರ. ಆತನಿಂದ ಒಳಗೆ ಹೋಗುವದೂ ಆಗಲೊಲ್ಲದು; ನಿಂತಲ್ಲಿಯೇ ನಿಂತು ಹರಭಟ್ಟನನ್ನು ಹೆಸರುಗೊಂಡು ಕರೆಯುವದೂ ಆಗಲೊಲ್ಲದು. ಆಗ ಆತನ ದನಿಯೇ ಕುಗ್ಗಿಹೋಗಿತ್ತು. ಕೆಲ ಕ್ಷಣಗಳ ನಂತರ ಅವನು ತನ್ನ ಗಡಿಯಾರದ ಕಡೆಗೆ ನೋಡಿದನು. ಆಗ ಒಂಬತ್ತು ಗಂಟೆ ಮೀರಿತ್ತು. ಕೂಡಲೆ ಅವನು ಒಳ್ಳೇ ಸಾಹಸದಿಂದ 'ಭಟ್ಟರೇ; ಹರಭಟ್ಟರೇ!' ಎಂದು ಕೂಗಿದನು.

ಚಂದ್ರಕಾಂತನ ಕೂಗಿಗೆ ಯಾರೂ ಉತ್ತರ ಕೊಡಲಿಲ್ಲ. ಆ ಓಣಿಯೊಳಗಿಂದ ಎಷ್ಟೋ ಜನರು ಹಾಯ್ದು ಹೋಗುತ್ತಿದ್ದರು. ಅವರಲ್ಲಿಯ ಕೆಲ ಜನರು ಆತನ ಆ ಸಾಹೇಬೀ ಟೀಪಿನ ಪೋಷಾಕಿನ ಕಡೆಗೆ ಟಕಮಕವೆಂದು ನೋಡುತ್ತ ನಿಂತುಕೊಂಡಿದ್ದರು. ಆಗ ಚಂದ್ರಕಾಂತನು ಮತ್ತೆ ಒಳ್ಳೇ ಗಟ್ಟಿಯಾಗಿ:—"ಹರಭಟ್ಟರೇ, ಬಾಗಿಲ ತೆಗೆಯಿರಿ" ಎಂದು ಕೂಗಿದನು.

ಯಾವಳೋ ಒಬ್ಬ ದಾಸಿಯು ಒಳಗಿನಿಂದಳೇ ಉತ್ತರವನ್ನಿತ್ತಳು. ಅವಳು ಬಾಗಿಲವರೆಗೆ ಬಂದು, ಕಿಂಡಿಯೊಳಗಿಂದ ಈತನ ಸಾಹೇಬೀ ಟೀಪಿಯ ಕಡೆಗೆ ಇಣಿಕಿ ನೋಡಿ, ಮೆಲ್ಲನೆ ಹಿಂದಕ್ಕೆ ಸರಿದಳು; ಮತ್ತೆ ಮಾತೇ ಆಡಲಿಲ್ಲ. ಚಂದ್ರಕಾಂತನು ಮತ್ತೆ ಮಾತೃಭಾಷೆಯಿಂದಲೇ ಕೂಗಲು, ಅವಳು ಅಷ್ಟೊಂದು ಅಂಜದೆ, ಒಳಗಿನಿಂದಲೇ:—"ಭಟ್ಟರು ಮನೆಯಲಿಲ್ಲ" ಎಂದು ಹೇಳಿದಳು.

"ಯಾವಾಗ ಬರುವರು?"

"ಮಧ್ಯಾಹ್ನದ ಹೊತ್ತಿಗೆ ಬರುವರು."

ಚಂದ್ರಕಾಂತನು ಬಾಗಿಲನ್ನು ದೂಡಿ, ಮನೆಯೊಳಗೆ ಹೊಕ್ಕನು. ಒಳಗೆ ಶಾರದೆಯೇ ಇರುವಳೆಂಬ ಭರವಸೆಯಿಂದ ಆನಂದ, ಅನುಮಾನ ಮತ್ತು ನಾಚಿಕೆಗಳು ಆತನಲ್ಲಿ ಒಮ್ಮೆಲೆ ಸಮ್ಮಿಶ್ರವಾಗಲು, ಆತನ ಹೃದಯವು ನಡುಗಿತು; ಆದರೆ ಒಳಗೆ ಬಂದ ಮೇಲೆ ಅವನಿಗೆ ಅಲ್ಲಿ ಶಾರದೆಯ ಭೆಟ್ಟಿಯಾಗ

ಲಿಲ್ಲ. ಆಗಲವನು:—"ಈ ಮನೆಯಲ್ಲಿ ಮತ್ತಾರೂ ಇರುವದಿಲ್ಲವೇ?" ಎಂದು ಪ್ರಶ್ನೆ ಮಾಡಲು,

ದಾಸಿ:—"ಇಲ್ಲ."

"ಆವಳು ಎಲ್ಲಿರುತ್ತಾಳೆ?"

"ಯಾವಳವಳು?"

"ಒಬ್ಬ ಸ್ತ್ರೀಯು........"

"ನನ್ನೊಬ್ಬಳನ್ನು ಬಿಟ್ಟು ಇಲ್ಲಿ ಯಾರೂ ಇರುವದಿಲ್ಲ."

"ಒಬ್ಬ ಚಿಕ್ಕ ವಯಸ್ಸಿನ ಹೆಣ್ಣುಮಗಳು?"

"ಇಲ್ಲ; ಇಲ್ಲಿ ಮತ್ತೆ ಯಾರೂ ಇರುವದಿಲ್ಲ."

ಕೂಡಲೆ ಚಂದ್ರಕಾಂತನು ಅಲ್ಲಿಯ ಕಿರಿಗಟ್ಟೆಯ ಮೇಲೆ ಒಮ್ಮೆಲೆ ಕುಸಿ ಕುಳಿತನು. ಕೆಲಕ್ಷಣಗಳ ನಂತರ:—"ಹಾಗಾದರೆ ಅವಳು ಎಲ್ಲಿಗೆ ಹೋದಳು?"

ಆ ವಾಕ್ಯವನ್ನು ಕೇಳಿ ಹರಭಟ್ಟನ ಮನೆಯ ಆ ದಾಸಿಯು ವಿಚಲಿತ ಳಾಗಿ:—"ಇಲ್ಲರೀ, ಇಲ್ಲಿಗೆ ಮತ್ತೆ ಯಾರೂ ಬಂದಿರುವದಿಲ್ಲ. ನಾನು ಮತ್ತು ನಮ್ಮ ಹರಭಟ್ಟರು ಹೀಗೆ ಇಬ್ಬರೇ ಈ ಮನೆಯಲ್ಲಿರುತ್ತೇವೆ. ಕಳೆದ ೧-೨ ತಿಂಗಳುಗಳಿಂದ ನಮ್ಮ ಮನೆಗೆ ಯಾವ ಯಾತ್ರಿಕರೂ ಸುಳಿದಿಲ್ಲ."

"ಚಂದ್ರಕಾಂತನು ಸ್ತಬ್ಧನಾಗಿ ನೆಲದ ಕಡೆಗೆ ನೋಡುತ್ತ ಕುಳಿತು ಬಿಟ್ಟನು. ಆತನ ಮನಸ್ಸಿನಲ್ಲಿ ಆಗ್ಗೆ ಯಾವ ವಿಚಾರಗಳೇಳುತ್ತಿದ್ದವೆಂಬ ದನ್ನು ಆ ಭಗವಂತನೇ ಬಲ್ಲನು! ಎಷ್ಟೋ ಹೊತ್ತಾದ ಬಳಿಕ ಆತನು ಮತ್ತೆ: "ನೀನು ಎಷ್ಟು ದಿನಗಳಿಂದ ಈ ಮನೆಯಲ್ಲಿರುತ್ತೀ?" ಎನ್ನಲು,

"ಸರಾಸರಿ ಒಂದು ವರ್ಷವಾಗಿರಬಹುದು."

"ಈ ದೀರ್ಘ ಕಾಲದಲ್ಲಿ ನೀನು ಇಲ್ಲಿ ಯಾವಳೊಬ್ಬಳನ್ನೂ ಕಾಣಲಿಲ್ಲ ವೇ? ಒಬ್ಬ ಗೌರಕಾಯದ, ಇನ್ನೂ ಮಕ್ಕಳು-ಮರಿಗಳಾಗದ ಅಥವಾ ತೀರ ಚಿಕ್ಕ ಮಗುವಿದ್ದ ಒಬ್ಬ ಹೆಣ್ಣುಮಗಳನ್ನೋ ಅಥವಾ ಮತ್ತಾವಳನ್ನೋ ನೀನು ಈ ಮನೆಯಲ್ಲಿ ಕಂಡಿಲ್ಲವೆ?"

"ಇಲ್ಲ. ನಾನು ಇಲ್ಲಿ ಯಾರೊಬ್ಬರನ್ನೂ ಕಂಡಿರುವದಿಲ್ಲ."

"ಇಲ್ಲಿಯ ಯಾವಳೊಬ್ಬಳ ಬಗ್ಗೆ ನೀನು ಯಾವ ಸಂಗತಿಯನ್ನೂ ಕೇಳಿಲ್ಲವೇ?"

"ಇಲ್ಲ. ಯಾವುದನ್ನೂ ಕೇಳಿರುವದಿಲ್ಲ."

ಚಂದ್ರಕಾಂತನು ಮತ್ತೆ ಏನನ್ನೂ ಕೇಳಲಿಲ್ಲ. ಅಲ್ಲಿಯೇ ಕುಳಿತು

ಹರಭಟ್ಟನ ಮಾರ್ಗ ನಿರೀಕ್ಷಿಸತೊಡಗಿದನು. ತನ್ನ ಪ್ರೀತಿಯ ಶಾರದೆಯು ಬದುಕಿರುವದಿಲ್ಲೆಂಬದನ್ನು ಆತನು ಇಷ್ಟರಿಂದಲೇ ಚೆನ್ನಾಗಿ ನಿಷ್ಕರ್ಷಿಸಿದ್ದನು. ಆದರೂ ಅದನ್ನು ಹರಭಟ್ಟನಿಂದ ಕೇಳಿ ತಿಳಕೊಳ್ಳುವದೇ ವಿಹಿತವೆಂದು ಆಲೋಚಿಸಿ, ಅದಕ್ಕಾಗಿಯೇ ಹರಭಟ್ಟನ ದಾರಿಕಾಯುತ್ತ ಅಲ್ಲಿಯೇ ಕುಳಿತನು. ಆಗಿನ ಕಾಲದ ಒಂದೊಂದು ನಿಮಿಷವೆಂದರೆ, ಒಂದೊಂದು ವರ್ಷದಷ್ಟು ದೀರ್ಘವಾಗಿ ಅವನಿಗೆ ಭಾಸವಾಗುತ್ತಿತ್ತು.

ಮಧ್ಯಾಹ್ನ ಸಮಯವು ಮೀರುತ್ತ ಬರಲು, ಹರಭಟ್ಟನು ಮನೆಗೆ ಬಂದನು. ಚಂದ್ರಕಾಂತನನ್ನು ದೃಷ್ಟಿಸುತ್ತಲೆ ಅವನು ಚಕಿತನಾದನು. ಆದರೂ ಕೇವಲ ಶಿಷ್ಟಾಚಾರಕ್ಕೆಂದು ಆತನು:—"ಓಹೋ! ಚಂದ್ರಕಾಂತರಾಯರೇನು? ಯಾವಾಗ ಬರೋಣಾಯಿತು?" ಎಂದು ಶುಷ್ಕೋಪಚಾರ ನಡೆಸಿದನು.

ಚಂದ್ರಕಾಂತನು ನಡುಗುವ ದನಿಯಿಂದ:—"ಬಂದು ಬಹಳ ಹೊತ್ತಾಯಿತು. ಇವಳು ಎಲ್ಲಿರುವಳು?"

"ಅವಳಲ್ಲವೇ-ಅವಳು........"

ಚಂದ್ರಕಾಂತನು ಮೈ ನಡುಗಿಸುತ್ತ ಎದ್ದು ನಿಂತನು; ಹಾಗು ತನ್ನ ದೇಹವು ನೆಲಕ್ಕೆ ಉರುಳಿ ಬೀಳದಂತೆ ಸಾವರಿಸಿಕೊಂಡು:—"ಆಕೆಯು ತೀರಿಕೊಂಡಿದ್ದಾಳಾಗ?"

"ಅದೇಕ ಸಾಯುವಳು?"

ಚಂದ್ರಕಾಂತನು ಗೊಗ್ಗರದನಿಯಿಂದ ಚೀರುತ್ತ:—"ಹರಭಟ್ಟರೇ, ಶಾರದೆಯು ಸತ್ತಿದ್ದಾಳಾಗ?"

ಹರಭಟ್ಟನು ವಿನಮ್ರನಾಗಿ ನುಡಿದನೇನಂದರೆ:—"ಶಾರದೆಯು ಸತ್ತಿರುವದಿಲ್ಲ; ಜೀವಂತವಾಗಿರುವಳು."

"ಅವಳಿರುವದೆಲ್ಲಿ?"

"ಮಾಬಳಜ್ಜನ ಮನೆಯಲ್ಲಿ."

"ಆ ಮನೆಯು ಎಲ್ಲಿದೆ?"

"ಇದೇ ಓಣಿಯ ಕೊನೆಗೆ ಸುಣ್ಣ ಹಚ್ಚಿದ ಆ ಚಿಕ್ಕಮನೆಯಿದೆಯಲ್ಲವೆ? ಅಲ್ಲಿ."

ತನ್ನ ತಲೆಯನ್ನು ಒತ್ತಿ ಹಿಡಿದು ನಿಂತುಕೊಂಡಿದ್ದ ಚಂದ್ರಕಾಂತನು ಮತ್ತೆ ಕುಳಿತನು. ಕೆಲ ಹೊತ್ತಿನ ವರೆಗೆ ಸುಮ್ಮನೆ ಕುಳಿತು, ಬಳಿಕ ಶಾಂತ ಭಾವದಿಂದ:—"ಅವಳು ಇಲ್ಲಿಗೇಕೆ ಬಂದು ಇರಲಿಲ್ಲ?"

ಪ್ರಸಂಗವು ಸಾಮಾನ್ಯವಾದುದಲ್ಲವೆಂದು ಹರಭಟ್ಟನು ತಿಳಿದನು. ಈಗ ಸುಮ್ಮನೆ ಸುಳ್ಳು ಹೇಳುವದರಿಂದ ಪ್ರಯೋಜನವಿಲ್ಲೆಂದು ತಿಳಿದು, ಒಳ್ಳೇ ಸಾಹಸದಿಂದ:—"ಯಾವಳಿಗೆ ತಾವು ತಮ್ಮ ಮನೆಯಲ್ಲಿರಲಿಕ್ಕೆ ಸ್ಥಳ ಕೂಡ ಕೊಡಲಿಲ್ಲವೋ, ಅಂಥವಳನ್ನು ನಾನು ನನ್ನ ಮನೆಯಲ್ಲಿಟ್ಟುಕೊಳ್ಳುವ ಬಗೆ ಹೇಗೆ? ನಾನಂತೂ ಹೇಳಿ-ಕೇಳಿ ಕ್ಷೇತ್ರಸ್ಥ ಬ್ರಾಹ್ಮಣನು. ನನ್ನ ಮನೆಗೆ ಹಲವು ಕಡೆಯಿಂದ ಹಲವು ಬಗೆಯ ಜನರು ಬರತಕ್ಕವರು. ಹತ್ತು ಮಂದಿಗೆ ವಿರುದ್ಧವಾದ ಆಚರಣೆಯು ನಮಗೆ ವಿಹಿತವಾದುದಲ್ಲ!"

ಚಂದ್ರಕಾಂತನಿಗೆ ಹರಭಟ್ಟನ ಅಂಬೋಣವು ನಿಜವಾಗಿ ತೋರಿತು. ಕೆಲ ಕ್ಷಣಗಳ ನಂತರ ಅವನು:—"ಆಕೆಯು ಮಾಬಳಜ್ಜನ ಮನೆಗೆ ಹೋದ ಕಾರಣವೇನು?"

"ಆತನೇ ಬಂದು ಅವಳನ್ನು ಕರೆದೊಯ್ದನು."

"ಅವನಾರು?"

"ಕಾಶೀಕ್ಷೇತ್ರವಾಸಿಗನಾದ ಒಬ್ಬ ದುಃಖಿತ ಬ್ರಾಹ್ಮಣನು."

"ಶಾರದೆಗೆ ಮೊದಲಿನಿಂದಲೂ ಆತನ ಗುರತಿದ್ದಿತೇನು?"

"ಹೌದು. ಚೆನ್ನಾಗಿ ಗುರತಿಸುತ್ತಿದ್ದಳು."

"ಆತನ ವಯಸ್ಸೆಷ್ಟು?"

ಮುದುಕನಾದ ಹರಭಟ್ಟನು ಖ್ಯೊ-ಖ್ಯೊಕ್ಕೆಂದು ನಗುತ್ತ:—"ಆ ಮುದುಕನು ಎಪ್ಪತ್ತರ ಮನೆಗೆ ಮುಟ್ಟಿರುತ್ತಾನೆ."

"ಆತನ ಮನೆಯಲ್ಲಿ ಮತ್ಯಾರಾರು ಇರುತ್ತಾರೆ?"

"ಒಬ್ಬ ದಾಸಿಯು, ಶಾರದೆಯು ಹಾಗು ಪುಟ್ಟ ವಿಶ್ವನಾಥನು."

"ವಿಶ್ವನಾಥನಾರು?"

"ಶಾರದೆಯ ಮಗನು."

ಕೂಡಲೆ ಚಂದ್ರಕಾಂತನು ಎದ್ದುನಿಂತು:—"ಹರಭಟ್ಟರೆ, ಹೊರಡುವೆ ನಿನ್ನು; ತೊಂದರೆ ಕೊಟ್ಟದ್ದಕ್ಕೆ ಕ್ಷಮಿಸಿರಿ" ಎಂದಂದು, ಹೊರಟೇ ಬಿಟ್ಟನು.

ಹರಭಟ್ಟನಾದರೂ ಅವನನ್ನು ಇರಿಸಿಕೊಳ್ಳುವ ಬಗ್ಗೆ ಹೆಚ್ಚಿನ ಒತ್ತಾಯ ಮಾಡಲಿಲ್ಲ.

ಚಂದ್ರಕಾಂತನು ಆ ಓಣಿಯೊಳಗಿನ ಸುಣ್ಣ ಹಚ್ಚಿದ ಮನೆಯ ಬಳಿಗೆ ಹೋಗಿ, ಒಬ್ಬ ದಾರಿಕಾರನಿಗೆ ಮಾಬಳಜ್ಜನ ಮನೆ ಯಾವುದೆಂದು ಕೇಳಿದನು.

"ಇದೇ ಮನೆ" ಎಂದು ಆ ದಾರಿಕಾರನು ಆ ಸುಣ್ಣ ಹಚ್ಚಿದ ಮನೆಯ ಕಡೆಗೆ ಬೊಟ್ಟು ಮಾಡಿ ತೋರಿಸಲು, ಚಂದ್ರಕಾಂತನು ನೆಟ್ಟಗೆ ಆ ಮನೆ

ಯನ್ನು ಪ್ರವೇಶಿಸಿದನು. ಎದುರಿನಲ್ಲಿ ಅವನಿಗಾರೂ ಕಾಣಿಸಲಿಲ್ಲ. ಸುಂದರ ಮೊಗದ ಹಾಗು ಪುಷ್ಟಕಾಯದ ಒಂದು ಚಿಕ್ಕ ಶಿಶುವು ಮನೆಯ ಅಂಗಳದಲ್ಲಿ ಒತ್ತಟ್ಟಿಗೆ ಕುಳಿತು ನೀರಾಟವನ್ನಾಡುತ್ತಿದ್ದಿತು. ಚಂದ್ರಕಾಂತನು ಭರ್ರನೆ ಹೋದವನೇ ಆ ಹುಡುಗನನ್ನೆತ್ತಿ ಮುದ್ದಿಡಹತ್ತಿದನು! ಆ ಶಿಶುವು ಆಗ ಹೆದರಲೂ ಇಲ್ಲ; ಬೆದರಲೂ ಇಲ್ಲ; ವಿಸ್ಮಯಾಶ್ಚರ್ಯಗಳನ್ನೂ ತೋರ್ಪಡಿಸ ಲಿಲ್ಲ. ಆ ಹುಡುಗನು ಆ ಓಣಿಯವರೆಲ್ಲರಿಗೂ ಪ್ರಿಯಕರವಾದುದರಿಂದ, ಅವನನ್ನು ಅಲ್ಲಿಯ ಪ್ರತಿಯೊಬ್ಬ ಪರಿಚಿತನೂ-ಅಪರಿಚಿತನೂ ಕೂಡಿಯೇ ಎತ್ತಿಕೊಂಡು ಮುದ್ದಿಡುತಿದ್ದರಾದ್ದರಿಂದ, ಆ ಶಿಶುವಿಗೆ ಅಪರಿಚಿತರ ಬಗ್ಗೆ ಭಯವಾಗಲಿ, ಸಂಕೋಚವಾಗಲಿ ಎಳ್ಳಷ್ಟೂ ಎನಿಸುತ್ತಿರಲಿಲ್ಲ. ಆ ಶಿಶುವು ತನ್ನನ್ನೆತ್ತಿಕೊಂಡಿದ್ದ ಚಂದ್ರಕಾಂತನ ಮೊಗನ್ನು ಹಿಡಿದು ಜಗ್ಗುತ್ತ:— "ನೀನು ಯಾರು?" ಎಂದು ತೊದಲ್ನುಡಿಗಳಿಂದ ಪ್ರಶ್ನೆ ಮಾಡಿತು."

ಚಂದ್ರಕಾಂತನು ಆ ಬಾಲಕನ ಆ ಸವಿನುಡಿಯನ್ನು ಕೇಳಿ, ಹರ್ಷ ನಿರ್ಭರದಿಂದ ಮತ್ತೆ ಮತ್ತೆ ಆತನನ್ನು ಮುದ್ದಿಡುತ್ತ:—ನಾನು ಅಪ್ಪನು" ಎಂದನು.

"ಅಪ್ಪನೆ?"

"ಅಹುದು, ನಾನು ನಿನ್ನ ಅಪ್ಪನು. ಮಗೂ, ನೀನಾರು?"

"ನಾನು ವಿಸು."

ಕೂಡಲೆ ಚಂದ್ರಕಾಂತನು ತನ್ನ ಬಕ್ಕಣದೊಳಗಿನ ಚಿನ್ನದ ಗಡಿಯಾರ ವನ್ನು ಸರಪಳಿ ಸಹಿತವಾಗಿ ತೆಗೆದು, ಅದನ್ನು ಆ ಪುಟ್ಟ ವಿಶ್ವನಾಥನ ಕೊರ ಳಲ್ಲಿ ಹಾಕಿದನು; ಹಾಗು ತನ್ನ ಜೇಬಿನೊಳಗಿನ ಚಾಕು, ಸೀಸಪೆನ್ಸಿಲ್, ಹಣದ ಪಾಕೇಟು ಮುಂತಾದ ಕೈಗೆ ಸಿಕ್ಕ ವಸ್ತುಗಳನ್ನೆಲ್ಲ ಆ ಮಗುವಿನ ಕೈ ಗಿತ್ತನು. ಆ ಎಲ್ಲ ವಸ್ತುಗಳಿಂದ ವಿಶ್ವನಾಥನ ಎರಡೂ ಕೈಗಳು ತುಂಬಿ ಹೋದವು. ಆ ಪದಾರ್ಥಗಳನ್ನು ನೋಡಿ ವಿಸ್ಮಯಗೊಂಡ ವಿಶ್ವನಾಥನು: "ಅಪ್ಪಾ!" ಎಂದಂದನು

ಚಂದ್ರಕಾಂತನು ಆತನ ಸುಂದರವಾದ ಪುಟ್ಟ ಮುಖವನ್ನು ತನ್ನ ಮುಖಕ್ಕೆ ಹಚ್ಚಿ ಹಿಡಿದುಕೊಂಡು:—"ಅಪ್ಪಾ, ವಿಸು! ತಮ್ಮಾ, ವಿಸು!!" ಎಂದೆನ್ನುತ್ತ ಚುಂಬಿಸಲಾರಂಭಿಸಿದನು:

ಅದೇ ಕಾಲಕ್ಕೆ ಮನೆಯ ಕಿಟಕಿಯಲ್ಲಿ ನಿಂತಿದ್ದ ದಾಸಿಯು ಇದನ್ನೆಲ್ಲ ಕಂಡು ಬಹು ಗಾಬರಿಗೊಂಡಳು. ಕೂಡಲೆ ಅವಳು ಅತಿ ತೀವ್ರವಾಗಿ ಹೋಗಿ ಶಾರದೆಯನ್ನು ಕುರಿತು:—"ಶಾರಕ್ಕಾ, ಹೊರಗೆ ಯಾವನೋ ಒಬ್ಬ ಸಾಹೇ

ಬನು ಬಂದಿದ್ದು, ಅವನು ವಿಶ್ವನಾಥನನ್ನು ಎತ್ತಿಕೊಂಡು ಮುದ್ದಿಡುತ್ತಿರುವನು" ಎಂದು ತಿಳಿಸಿದಳು. ಈ ಪ್ರಸಂಗವು ನಡೆದ ಕಾಲಕ್ಕೆ ಮಾಬಳಜ್ಜನು ಮನೆಯಲ್ಲಿರಲಿಲ್ಲ. ಎಷ್ಟೋ ವರ್ಷಗಳ ನಂತರ ಅವನು ಇಂದು ಕಾಶೀ ವಿಶ್ವೇಶ್ವರನ ಪೂಜೆಗೆಂದು ದೇವಾಲಯಕ್ಕೆ ಹೋಗಿದ್ದನು. ಶಾರದೆಯಾದರೂ ಹರಕು ಮಡಿಸೀರೆಯನ್ನುಟ್ಟುಕೊಂಡು ಅಡಿಗೆ ಮಾಡುವದರಲ್ಲಿ ತೊಡಗಿದ್ದಳು. ಅದರಿಂದ ಅವಳು ಅದೇ ಸ್ಥಿತಿಯಲ್ಲಿ ಹೊರಗೆ ಬರಲಾರದೆ, ದಾಸಿಯನ್ನು ಕುರಿತು:—"ದಾಸೀ, ಅವರಾರಿರಬಹುದು?"

"ಶಾರಕ್ಕಾ, ಅವನಾರೆಂಬದನ್ನು ನಾನಾದರೂ ಏನು ಬಲ್ಲೆ? ಆತನು ವಿಶ್ವನಾಥನನ್ನೆತ್ತಿಕೊಂಡು ಒಳ್ಳೇ ಹರ್ಷಭರದಿಂದ ಒಳಂಗಳದಲ್ಲಿ ಇತ್ತಿಂದತ್ತ, ಅತ್ತಿಂದಿತ್ತ ಅಡ್ಡಾಡುತಲಿದ್ದಾನೆ."

ಶಾರದೆಯು ಹೊರಗೆ ಬರಲಾರದೆ:—"ಮತ್ತಿವರಾರವ್ವ!" ಎಂದೆಂದುಕೊಂಡು ಚಿಂತಿತಳಾದಳು.

---

೧೨ನೇ ತರಂಗ:—**ಬಾರಪ್ಪಾ, ಬಾ!**

ಬಳಿಕ ಶಾರದೆಯು ಚಿಂತಿತಮನಸ್ಸಿನಿಂದಲೇ ಸುಲ್ಲನೆ ನಡುಮನೆಯಲ್ಲಿ ಬಂದು, ಕಿಟಕಿಯೊಳಗಿಂದ ಹೊರಗೆ ಇಣುಕಿ ನೋಡಿದಳು. ಮೊದಮೊದಲು ಅಲ್ಲಿ ಅವಳಿಗೆ ಯಾರೂ ಕಾಣಿಸಲಿಲ್ಲ; ಆದರೆ ಅಲ್ಪಾವಕಾಶದಲ್ಲಿಯೆ ಕೇವಲ ಪರಿಚಿತ ಮೊಗದ ಗೃಹಸ್ಥನೊಬ್ಬನು ಕಾಣಿಸಿಕೊಂಡಾಯಿತು; ಹಾಗು ಆ ಸಾಹೇಬೀ ಠೀವಿಯ ಗೃಹಸ್ಥನು ಮಾತೃಭಾಷೆಯಲ್ಲಿಯೇ ವಿಶ್ವನಾಥನೊಡನೆ ಅಸ್ಫುಟವಾಗಿ ಮಾತನಾಡುತ್ತಿದ್ದುದು ಅವಳಿಗೆ ಕೇಳಿಸಿತು. ಆ ಗೃಹಸ್ಥನ ಮುಖಚರ್ಯೆಯಂತೆ ಆತನ ದನಿಯೂ ಶಾರದೆಗೆ ಚಿರಪರಿಚಿತದ್ದಾಗಿ ಅನಿಸಿತು. ಕೂಡಲೆ ಅವಳು ಮತ್ತಿಷ್ಟು ಹತ್ತಿರಕ್ಕೆ ಹೋಗಿ ಆ ಗೃಹಸ್ಥನಾರೆಂಬದನ್ನು ನೋಡಿದಳು. ಕೂಡಲೆ ಅವಳಿಗೆ ಆತನ ಗುರತು ಹತ್ತಿತು! ಆ ಗೃಹಸ್ಥನು ಬೇರೆ ಯಾರೂ ಆಗಿರದೆ, ತನ್ನ ಗಂಡನಾದ ಚಂದ್ರಕಾಂತನೇ ಎಂಬುದು ಶಾರದೆಗೆ ತಟ್ಟನೆ ಹೊಳೆಯಿತು!! ಅವಳು ಲಗುಬಗೆಯಿಂದ ಅವನೆಡೆಗೆ ಹೋಗಿ ಆತನ ಪದದ್ವಯಗಳನ್ನು ವಂದಿಸಿ, ತಲೆಬಾಗಿಸಿಕೊಂಡು ನಿಂತಳು.

ಆಗ ಚಂದ್ರಕಾಂತನು ಅವಳನ್ನು ದೃಷ್ಟಿಸಿ:—"ಶಾರದೇ!" ಎಂದೆನ್ನುತ್ತ ಬಿಗಿದಪ್ಪಿಕೊಂಡನು.

ಬಳಿಕ ಚಂದ್ರಕಾಂತನು ಮನೆಯೊಳಗೆ ಹೋಗಿ ಕುಳಿತು, ಶಾರದೆಯೊಡನೆ ಆಲಾಪ-ಪ್ರಲಾಪಗಳಲ್ಲಿ ನಿಮಗ್ನನಾದನು. ಶಾರದೆಯು ಚಂದ್ರ

ಕಾಂತನನ್ನು ಕುರಿತು:—“ತಾವು ಬಹಳ ಸೊರಗಿ ಕೃಶರಾಗಿರುವಿರಲ್ಲ? ಬೇನೆ ಬಿದ್ದಿದ್ದಿರೇನು?” ಎಂದು ಕೇಳಲು, ಚಂದ್ರಕಾಂತನು ನಸುನಕ್ಕನು ಮಾತ್ರ. ಅವಳ ಪ್ರಶ್ನೆಗೆ ಉತ್ತರವನ್ನೇನು ಕೊಡಲಿಲ್ಲ. ಬಳಿಕ ಆತನು ವಿಶ್ವನಾಥನನ್ನು ಎತ್ತಿಕೊಂಡು, ಶಾರದೆಯ ಮುಖವನ್ನೂ ಆತನ ಮುಖವನ್ನೂ ಟಕಮಕ ವೆಂದು ನೋಡತೊಡಗಿದನು. ಹಾಗೆ ಎಷ್ಟೋ ಹೊತ್ತಿನ ವರೆಗೆ ಏಕೋ ಪ್ರಕಾರವಾಗಿ ನೋಡಿದ ಮೇಲೆ ಶಾರದೆಯು ಆತನಿಗೆ ಕೈ-ಕಾಲು-ಮೋರೆ ತೊಳೆಯಲಿಕ್ಕೆ ನೀರು ತಂದುಕೊಟ್ಟಳು. ಅಂಗಿ-ಟೊಪ್ಪಿಗೆಗಳನ್ನು ತೆಗೆದಿಟ್ಟು, ಚಂದ್ರಕಾಂತನು ಕೈ-ಕಾಲು ತೊಳೆದುಕೊಂಡನು. ಬಳಿಕ ಶಾರದೆಯು ತಂದು ಕೊಟ್ಟ ಅಲ್ಪೋಪಹಾರವನ್ನು ಸವಿದು ನೀರು ಕುಡಿದನು. ಬೀಸ ಣಿಕೆಯಿಂದ ಗಾಳಿ ಬೀಸುತ್ತ ಶಾರದೆಯು ಅವನ ಹತ್ತಿರವೇ ನಿಂತುಕೊಂಡಳು. ಅವಳು ತನ್ನ ಗಂಡನನ್ನು ಇನ್ನು ಈ ಜನ್ಮದಲ್ಲಿ ಕಾಣುವೆನೆಂಬ ಆಶೆಯನ್ನು ಕೂಡ ತೊರೆದಿದ್ದಳು; ಆದರೆ ಇಂದು ಚಂದ್ರಕಾಂತನ ಆಕಸ್ಮಿಕ ಆಗಮನ ದಿಂದ ಅವಳು ಹರ್ಷಪ್ರಫುಲ್ಲಿತಳಾದಳು. ಆ ಅವಸ್ಥೆಯಲ್ಲಿ ಅವಳ ಕಣ್ಣು ಗಳೊಳಗಿಂದ ಆನಂದಬಾಷ್ಪಗಳು ಏಕೋಪ್ರಕಾರವಾಗಿ ಉದುರಹತ್ತಿದವು.

ಶಾರದೆಯು ಈ ಪ್ರಕಾರವಾಗಿ ಚಂದ್ರಕಾಂತನ ಸೇವೆಯಲ್ಲಿ ತತ್ಪರ ಳಾಗಿದ್ದರೂ, ಚಂದ್ರಕಾಂತನ ಲಕ್ಷ್ಯವು ಅವಳ ಕಡೆಗೆ ಹೆಚ್ಚಾಗಿರಲಿಲ್ಲ. ಆತನು ಪುಟ್ಟ ವಿಶ್ವನಾಥನ ತೊದಲ್ನುಡಿಯ ಹರಟೆಯಲ್ಲಿಯೇ ನಿಮಗ್ನನಾಗಿ ದ್ದನು; ಆಗಿನ ಕಾಲದ ಆ ತಂದೆ-ಮಕ್ಕಳ ಸಂಭಾಷಣವನ್ನು ಕೇಳಿದ್ದರೆ, ಅಲ್ಲಿ-ಆ ಮನೆಯಲ್ಲಿ-ಅವರೀರ್ವರ ಹೊರತು ಬೇರೆಯವರಿದ್ದ ಪರಿವೆಯೇ ಅವರಿಗಿದ್ದಿಲ್ಲವೆಂದು ವ್ಯಕ್ತವಾಗುತಲಿತ್ತು.

ಅದನ್ನು ಕಂಡು ಶಾರದೆಯು ಮಗನನ್ನು ಕುರಿತು:—“ತಮ್ಮಾ, ಇತ್ತ ನೋಡು” ಎಂದಂದು, ವಿಶ್ವೇಶ್ವರನ ಏಕಾಗ್ರತೆಯನ್ನು ಭಂಗಪಡಿಸಿದಳು. ಕೂಡಲೆ ಆ ಮಗುವು ಚಂದ್ರಕಾಂತನ ಬಳಿಯಿಂದ ಓಡಿಹೋಗಲೆತ್ನಿಸಿ ದೊಪ್ಪನೆ ಬೀಳುತ್ತಿತ್ತು; ಆದರೆ ಚಂದ್ರಕಾಂತನು ಒಳ್ಳೇ ಜಾಗ್ರತೆಯಿಂದ ಅದನ್ನು ಹಿಡಿದನು. ಆ ಹುಡುಗನು ಈ ಮೊದಲು ತನ್ನ ತಾಯಿಯು ಚಂದ್ರಕಾಂತನ ಪಾದಗಳನ್ನು ಮುಟ್ಟಿ ನಮಸ್ಕರಿಸಿದ್ದನ್ನು ನೋಡಿದ್ದನಷ್ಟೇ? ತಾನೂ ಅದರಂತೆ ತನ್ನ ತಂದೆಯ ಪಾದಗಳನ್ನು ಮುಟ್ಟಿ ಮುಟ್ಟಿ ನಮಸ್ಕಾರ ಮಾಡಿದವನೇ, ಆತನ ಬಳಿಯಿಂದ ಓಡಿ ತಾಯಿಯ ಮರೆಗೆ ಹೋಗಿ ನಿಂತು ಕೊಂಡನು. ಚಂದ್ರಕಾಂತನು ಮತ್ತೆ ಅವನನ್ನು ಹಿಡಿಯಬೇಕೆಂದನು; ಆದರೆ ಅವನು ಆತನ ಕೈಗೆ ಸಿಗಲೇ ಇಲ್ಲ.

ಬಳಿಕ ಶಾರದೆಯು ಚಂದ್ರಕಾಂತನ ಬಳಿಯಲ್ಲಿ ಕುಳಿತು:-"ನಾಥ, ನಿಮಗೇನೋ ಆಗಿರುವಂತೆ ಕಾಣುತ್ತದೆ. ಇಲ್ಲದಿದ್ದರೆ ನೀವಿಷ್ಟು ಸೊರಗುತ್ತಿರಲಿಲ್ಲ."

"ಇಲ್ಲ-ಇಲ್ಲ; ನನಗೆ ಯಾವ ಬೇನೆ-ಬೇಸರಿಕೆಗಳೂ ಉಂಟಾಗಿಲ್ಲ."

"ಹಾಗಾದರೆ, ಒಳ್ಳೇ ಚಿಂತಾಕ್ರಾಂತರಂತೇಕೆ ಕಾಣುತ್ತಿರುವಿರಿ?"

"ಶಾರದೆ, ಅದಿರಲಿ. ನೀನೇಕೆ ಇಷ್ಟು ಕೃಶಳಾಗಿರುತ್ತೀ? ನಿನಗೇನಾಗುತ್ತಿರುವದು?"

ಶಾರದೆಯು ಆ ಪ್ರಶ್ನೆಗೆ ಉತ್ತರವನ್ನು ಕೊಡದೆ, ಮತ್ತೆ:—"ತಡವಾಗಿದೆ. ಸ್ನಾನಕ್ಕೆ ಏಳಬೇಕು."

ಆಗ ಚಂದ್ರಕಾಂತನು ತಾನು ಎಲ್ಲಿರುವೆನೆಂಬದನ್ನು ಯೋಚಿಸಿ:—"ಈ ಮನೆಯ ಯಜಮಾನನೆಲ್ಲಿರುತ್ತಾನೆ?"

"ಅವನು ಈ ದಿನ ಶ್ರೀವಿಶ್ವೇಶ್ವರನ ಪೂಜೆಗೆಂದು ದೇವರ ಗುಡಿಗೆ ಹೋಗಿರುತ್ತಾನೆ. ಅವನು ಬಹುಶಃ ಸಾಯಂಕಾಲಕ್ಕೇ ಬರಬಹುದಾಗಿದೆ."

"ನೀನು ಅವನನ್ನು ಏನೆಂದು ಸಂಬೋಧಿಸುತ್ತೀ?"

"ನಾನು ಮೊದಲು ಆತನನ್ನು 'ಅಜ್ಜ'ನೆಂದು ಕರೆಯುತ್ತಿದ್ದೆನು; ಈಗಲಾದರೂ ಅದೇ ಹೆಸರಿನಿಂದಲೇ ಕರೆಯುತ್ತಿರುತ್ತೇನೆ."

ಚಂದ್ರಕಾಂತನು ಮತ್ತೇನನ್ನೂ ಕೇಳಲಿಲ್ಲ. ಕ್ಷಣ ಕಾಲ ಸುಮ್ಮನೆ ಕುಳಿತುಬಿಟ್ಟನು. ಆಗ ಶಾರದೆಯು:—"ನಿಮ್ಮ ಸಂಗಡ ಮತ್ತೆ ಯಾರ್‍ಯಾರು ಬಂದಿರ ತ್ತಾರೆ?"

"ರಾಮನೂ ಕೃಷ್ಣನೂ ಬಂದಿರುತ್ತಾರೆ. ಅವರು ರೇಲ್ವೇಸ್ಟೇಶನ್ನಿನ ಬಳಿಯ ಮುಸಾಫರಖಾನೆಯಲ್ಲಿ ನನ್ನ ಟಪಾಲಿನ ಹಾದೀ ನೋಡುತ್ತ ಕುಳಿತಿರುತ್ತಾರೆ."

"ಅವರನ್ನು ಇಲ್ಲಿಗೆ ಕರೆತರುವ ಸಾಹಸವಾಗಲಿಲ್ಲವೆ?"

ಚಂದ್ರಕಾಂತನು ಅದಕ್ಕೆ ಏನೆಂದು ಉತ್ತರ ಕೊಡುವನು? ಬಳಿಕ ಆತನು ಸ್ನಾನ ಮಾಡಿ ಊಟಕ್ಕೆ ಕುಳಿತನು. ಶಾರದೆಯು ಉಣಬಡಿಸಿದಳು. ಎಲೆಯ ಮುಂದೆ ಕುಳಿತು, ಆತನು ಕೆಲ ಕ್ಷಣಗಳ ವರೆಗೆ ದೇವರನ್ನು ಧ್ಯಾನಿಸಹತ್ತಿದನು. ಆಗ ಶಾರದೆಯು ಸಂಶಯಚಕಿತಳಾಗಿ:—"ನೀವು ನನ್ನ ಕೈಯ ಅಡಿಗೆಯನ್ನುಣ್ಣಲಿಕ್ಕೆ ಅನುಮಾನಿಸುವಿರೇನು?" ಎನ್ನಲು,

ಚಂದ್ರಕಾಂತನು ಕಣ್ದೆರೆದು ನಾಚಿಕೆಯಿಂದ ತಲೆಬಾಗಿಸಿದನು. ಶಾರದೆಯನ್ನು ತಾನು ತ್ಯಜಿಸಿರುವೆನೆಂಬದೂ ಅವಳ ಕೈಯ ಅಡಿಗೆಯನ್ನು ತಾನು ಮುಟ್ಟತಕ್ಕದಲ್ಲವೆಂಬದೂ ಇದುವರೆಗೆ ಆತನ ಸ್ಮರಣದಲ್ಲಿ ಕೂಡ ಇರಲಿಲ್ಲ. ಅದರಿಂದ ಶಾರದೆಯ ಆ ಪ್ರಶ್ನೆಯನ್ನು ಕೇಳಿ, ಆತನು ಅಂತರಂಗದಲ್ಲಿ ಹೆಚ್ಚಾಗಿ

ಕ್ಲೇಶಗೊಂಡನು; ಹಾಗು ಅವನು ಎಷ್ಟೋ ಕ್ಷಣಗಳ ವರೆಗೆ ಮತ್ತೆ ಸುಮ್ಮನೆ ಕುಳಿತು, ನಂತರ:-"ಶಾರದೆ, ಈ ಮಧ್ಯಾಹ್ನ ಸಮಯದಲ್ಲಿ ನನ್ನ ಕಣ್ಣೊಳಗಿಂದ ನೀರನ್ನು ಕಾಣದ ಹೊರತು ನಿನಗೆ ಸಮಾಧಾನವೆನಿಸುವದಿಲ್ಲವೆ?" ಎನ್ನಲು,

ಆ ವಾಕ್ಯವನ್ನು ಕೇಳಿದ ಶಾರದೆಯು ಗಲ್ಲ ಗಲ್ಲ ಬಡೆಕೊಂಡು, ಅಳುವ ದನಿಯಿಂದ:—"ಛೀ-ಛೀ! ನನ್ನ ಉದ್ದೇಶವು ಹಾಗಿರಲಿಲ್ಲ. ನೀವು ಎಲೆಯ ಮುಂದೆ ಸುಮ್ಮನೆ ಕುಳಿತದ್ದನ್ನು ಕಂಡು, ನಾನು ಹಾಗೆಂದು ಕೇಳಿದೆನು. ನನ್ನ ಅಪರಾಧವನ್ನು ಕ್ಷಮಿಸಿ, ಸ್ವಸ್ಥಚಿತ್ತದಿಂದ ಭೋಜನ ಮಾಡಬೇಕು" ಎಂದು ಪ್ರಾರ್ಥಿಸಿದಳು.

ಭೋಜನೋತ್ತರದಲ್ಲಿ ಚಂದ್ರಕಾಂತನು ವಿಶ್ರಾಂತಿಗಾಗಿ ಅಡ್ಡಾದನು. ವಿಶ್ವನಾಥನೂ ಆತನ ಮಗ್ಗಲಲ್ಲಿ ಹೋಗಿ ತೊದಲ್ನುಡಿಯಿಂದ ಹರಟುತ್ತ ಮಲಗಿದನು. ಶಾರದೆಯು ಅಡಿಗೆಯ ಮನೆಯ ಕೆಲಸವನ್ನು ತೀರಿಸಿಕೊಂಡು ಅಲ್ಲಿಗೆ ಹೋದಳು. ಆಗ ಚಂದ್ರಕಾಂತನು:—"ಶಾರದೇ, ನಿನ್ನ ಕೆಲಸ-ಬೊಗಸೆಗಳೆಲ್ಲ ಮುಗಿದವೇ?" ಎನ್ನಲು,

"ಕೆಲಸವು ತೀರಿತು; ಆದರೆ ಮಾಬಳಜಾನು ಮಾತ್ರ ಇನ್ನೂ ಬರಲಿಲ್ಲ." ಶಾರದೆಯೆಂದಳು.

ನಂತರ ಆ ದಂಪತಿಗಳು ತಮ್ಮ ಸುಖ-ದುಃಖದ ಮಾತು-ಕಥೆಗಳಲ್ಲಿ ತೊಡಗಿದರು. ಶಾರದೆಯು ತನ್ನ ಮನೆಯ, ವಸ್ತ್ರ-ಒಡವೆಗಳ, ಶಶಿಮುಖಿ-ವಲ್ಲಭರಾಯರ, ದಾಸ-ದಾಸಿಯರ, ಕಾರಕೂನ-ಕಾರಭಾರಿಗಳ ಯೋಗಕ್ಷೇಮ ವನ್ನು ವಿಚಾರಿಸಿದಂತೆ, ತನ್ನ ಆ ವೃದ್ಧ ಗೆಳತಿಯ ಕ್ಷೇಮಸಮಾಚಾರವನ್ನೂ ವಿಚಾರಿಸಿದಳು; ಅಲ್ಲದೆ ಮಾರ್ತಂಡರಾಯರ ಮನೆಯವರ ಹಾಗು ತನಗೆ ಪರಿಚಯವಿದ್ದ ಆ ಊರ ಪ್ರತಿಯೊಂದು ವ್ಯಕ್ತಿಯ ಯೋಗಕ್ಷೇಮವನ್ನು ಮನಃ ಪೂರ್ವಕವಾಗಿ ವಿಚಾರಿಸಿದಳು. ಆಗ ಆ ಸಂಗತಿಗಳನ್ನೆಲ್ಲ ಕೇಳುವದರಿಂದ ತನಗೆ ಕೊಂಚವೂ ಲಾಭವಿಲ್ಲೆಂಬದು ಶಾರದೆಗಾಗಲಿ, ಅದನ್ನೆಲ್ಲ ಸಾದ್ಯಂತ ವಾಗಿ ತಿಳಿಸುವದರಿಂದ ಏನೂ ಲಾಭವಿಲ್ಲೆಂಬದು ಚಂದ್ರಕಾಂತನಿಗಾಗಲಿ ತಿಳಿಯಲೇ ಇಲ್ಲ; ಇಷ್ಟೇ ಅಲ್ಲ, ಅದನ್ನು ಹೇಳಿ-ಕೇಳುವದರಿಂದ ತಮ್ಮ ಉಭಯತರ ದುಃಖವು ಮಾತ್ರ ಒತ್ತರಿಸುತ್ತಿರುವದೆಂಬದರ ಕಡೆಗೆ ಅವರೀ ರ್ವರ ಲಕ್ಷ್ಯವೂ ಇರಲಿಲ್ಲ.

ಕೆಲ ಕ್ಷಣಗಳ ವರೆಗೆ ಅವರು ಆ ಪ್ರಕಾರದ ಸಂಭಾಷಣದಲ್ಲಿ ಮಗ್ನ ರಾಗಿರಲು, ಶಾರದೆಯು ಒಮ್ಮೆಲೆ ಮೆಟ್ಟಿ ಬಿದ್ದಂತಾಗಿ ಕೇಳುತ್ತಾಳೆ:—"ನೀವು ಎರಡನೇ ಲಗ್ನವನ್ನು ಮಾಡಿಕೊಂಡಿರುವಿರಷ್ಟೇ?"

ಚಂದ್ರಕಾಂತನು ಮುಗಳ್ನಗೆಯಿಂದ ಚೇಷ್ಟೆಗಾಗಿ:—"ಮಾಡಿಕೊಂಡಿರುತ್ತೇನೆ."

"ಅವಳು ಯಾವ ಊರವಳು?"

"ಇದೇ ಊರವಳು."

"ಅವಳು ಹೇಗಿರುವಳು?"

"ಕೇವಲ ನಿನ್ನಂತೆಯೇ!"

ಈ ಉತ್ತರವನ್ನು ಕೇಳಿ ಶಾರದೆಯ ಅಂತರಂಗದಲ್ಲಿ ಸವತಿ ಮತ್ಸರವು ಜಾಗೃತವಾಯಿತು. ಆ ವ್ಯಥೆಯಿಂದ ಅವಳು ಹೆಚ್ಚು ಮಾತಾಡಲಾರದೆ, ಅಲ್ಲಿಯೇ ನೆಲದ ಮೇಲೆ ಬಿದ್ದುಕೊಂಡಳು. ಇದು ವರೆಗೆ ಗೌರಿಯಂತೆ ತೇಜಃಪುಂಜಳಾಗಿ ತೋರುತ್ತಿದ್ದ ಅವಳ ಮುಖವು, ಕ್ಷಣದಲ್ಲಿ ಕಪ್ಪಿಟ್ಟು ಅಸಡ್ಡಾಳಾಗಿ ತೋರಲಾರಂಭಿಸಿತು!

ಶಾರದೆಯ ಆ ಸ್ಥಿತಿಯನ್ನು ಕಂಡು ಚಂದ್ರಕಾಂತನಿಗೂ ಕೆಡಕೆನಿಸಿತು. ಕೂಡಲೆ ಆತನು ಎದ್ದು, ಶಾರದೆಯ ಬಳಿಗೆ ಬಂದು, ಕೈ ಹಿಡಿದು, ಅವಳನ್ನೆಬ್ಬಿಸುವ ಉದ್ಯೋಗಕ್ಕೆ ಹತ್ತಿದನು; ಆದರೆ ಅವಳು ನೆಲಬಿಟ್ಟು ಏಳದಾದಳು. ಆಗ ಚಂದ್ರಕಾಂತನು ಅವಳ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕಣ್ಣೀರುದುರಿಸುತ್ತ:—"ಶಾರದೇ!!" ಎಂದನು.

ಶಾರದೆಯು ಒಂದೇ ಒಂದು ಮುಹೂರ್ತದ ವರೆಗೆ ತನ್ನ ಗಂಡನ ಮುಖವನ್ನು ಟಕಮಕವೆಂದು ನೋಡಿ, ಮತ್ತೆ ಕಣ್ಣುಮುಚ್ಚಿದಳು. ಆಗ ಆಕೆಯ ಅಧರೋಷ್ಟಗಳು ಒಳ್ಳೇ ಕೆಂಪು ವರ್ಣವನ್ನು ಧರಿಸಿದವು. ಅವಳು ಬಾಯಿಂದ ಏನೇನೋ ಅಸ್ಫುಟವಾಗಿ ನುಡಿದಳು; ಆದರೆ ಆ ಶಬ್ದಗಳು ಚಂದ್ರಕಾಂತನಿಗೆ ಕೇಳಿಸಲಿಲ್ಲ.

ಆಕೆಯ ಆ ಸ್ಥಿತಿಗತಿಯನ್ನು ನೋಡಿ ಬೆದರಿದ ಚಂದ್ರಕಾಂತನು:—'ನೀರು-ನೀರೆ'ಂದು ಕೂಗಿದನು. ನಡುಮನೆಯಲ್ಲಿದ್ದ ದಾಸಿಯು ನೀರಿನ ತಂಬಿಗೆಯನ್ನು ತಕ್ಕೊಂಡು ಓಡುತ್ತೋಡುತ್ತ ಅಲ್ಲಿಗೆ ಬಂದಳು; ಹಾಗು ಚಂದ್ರಕಾಂತನನ್ನು ಕುರಿತು:—"ರಾಯರೇ, ತುಸ ಸರಿಯಿರಿ. ಇವರಿಗೆ ಆಗಾಗ್ಗೆ ಹೀಗೆಯೇ ಆಗುತ್ತಿರುತ್ತದೆ. ಇವರ ಕಣ್ಣಿಗೆ ನೀರು ಹಚ್ಚಿ, ನೆತ್ತಿಗೆ ತುಸ ನೀರು ಬಡಿದರೆ, ಕೂಡಲೆ ಇವರು ಎದ್ದು ಕೂಡ್ರುತ್ತಾರೆ" ಎಂದು ಹೇಳಲು, ಚಂದ್ರಕಾಂತನು ಸರಿದು ಕುಳಿತನು. ದಾಸಿಯು ಶಾರದೆಗೆ ನೀರು ತಟ್ಟಿ, ಗಾಳಿ ಬೀಸಲಾರಂಭಿಸಿದಳು; ಹಾಗು ಆಕೆಯ ಕಿವಿಯಲ್ಲಿ 'ಶಾರಕ್ಕಾ! ಶಾರಕ್ಕಾ!!' ಎಂದು ಗಟ್ಟಿಗಟ್ಟಿಯಾಗಿ ಕೂಗಹತ್ತಿದಳು.

ಅಲ್ಪಾವಕಾಶದಲ್ಲಿಯೇ ಶಾರದೆಯು ಸ್ಮೃತಿಗೊಂಡಳು; ಹಾಗು ನಾಚಿಕೆಯಿಂದ ಸೆರಗು ಸರಿಪಡಿಸಿಕೊಳ್ಳುತ್ತ ಎದ್ದು ಕುಳಿತಳು. ದಾಸಿಯು ತನ್ನ ಕೆಲಸಕ್ಕೆ ಹೊರಟು ಹೋದಳು. ಶಾರದೆಯ ಆಗಿನ ಅವಸ್ಥೆಯನ್ನು ಕಂಡ ಚಂದ್ರಕಾಂತನ ಮುಖವು ಹುಚ್ಚು ಹಿಡಿದವರಂತಾಯಿತು.

ಅದನ್ನು ಕಂಡು ಶಾರದೆಯು ನಸುನಗುತ್ತ:—"ನಾಥಾ, ನನ್ನನ್ನು ಕಂಡು ಅಂಜಿದ್ದಿರಲ್ಲವೆ?"

ಚಂದ್ರಕಾಂತನು ತನ್ನ ಕಣ್ಣುಗಳಿಂದ ದಳದಳನೆ ಸುರಿಯುತ್ತಿದ್ದ ಅಶ್ರುಗಳನ್ನು ಒರೆಸಿಕೊಳ್ಳುತ್ತ:—"ಹೆದರಿದ್ದೆನು; ನಿನ್ನ ಅವಸ್ಥೆಯು ಮುಗಿಯಿತೆಂತಲೇ ನನ್ನ ತಿಳುವಳಿಕೆಯಾಗಿ ಬಿಟ್ಟಿತ್ತು."

'ನಿಮ್ಮ ತೊಡೆಯ ಮೇಲೆ ಮಲಗಿರುವಾಗ ನನ್ನ ಪ್ರಾಣವು ಹೋಗಿದ್ದರೆ, ನನ್ನ ಸಮಾನಳಾದ ಪುಣ್ಯವಂತಳೇ ಇರಲಿಲ್ಲೆಂದು' ಶಾರದೆಯು ತನ್ನ ಮನಸ್ಸಿನಲ್ಲಿಯೇ ಅಂದುಕೊಂಡು, ಬಹಿರಂಗವಾಗಿ:—"ನನಗೆ ಈ ಬಗೆಯಾಗಿ ಆಗಾಗ್ಗೆ ಆಗಹತ್ತಿರುತ್ತದೆ."

"ಅದೇನೋ ತಿಳಿಯಿತು. ನಮ್ಮೂರಲ್ಲಿದ್ದಾಗ ನಿನಗೆ ಹೀಗಾಗುತ್ತಿರಲಿಲ್ಲ. ಇತ್ತೀಚೆಗೆ ಹೀಗಾಗಹತ್ತಿದೆಯೆಂಬಂತೆ ಕಾಣುತ್ತಿದೆ" ಎಂದಂದು, ಚಂದ್ರಕಾಂತನು ಎಷ್ಟೋ ಹೊತ್ತಿನವರೆಗೆ ಸ್ತಬ್ಧನಾಗಿ ಕುಳಿತನು. ಆ ಮೇಲೆ ತನ್ನ ಬಕ್ಕಣದೊಳಗಿನ ಕೀಲೀ ಕೈಗಳ ಸರವೊಂದನ್ನು ತೆಗೆದು, ಅದನ್ನು ಶಾರದೆಯ ಸೀರೆಯ ಸೆರಗಿಗೆ ಕಟ್ಟಿ:—"ಶಾರದೆ, ಇಗೋ, ಈ ನಿನ್ನ ಕೀಲೀ ಕೈ ಸರವನ್ನು. ಬರುವಾಗ ನೀನು ಇದನ್ನು ನನ್ನಲ್ಲಿ ಇಡಿಗಂಟೆಂದು ಇಟ್ಟು ಬಂದಿದ್ದೆ. ಇಂದು ನಾನು ನಿನಗೆ ಇದನ್ನು ತಿರುಗಿ ಕೊಟ್ಟಿರುತ್ತೇನೆ. ಇದು ನಿನ್ನದು ಅಹುದೋ ಅಲ್ಲವೋ ನೋಡಿಕೋ."

ಶಾರದೆಯು ಆ ಸರವನ್ನು ನೋಡಿದಳು. ಅದರ ಉಂಗುರ ಸಹಿತವಾಗಿ ಅದು ಜಂಗು ಹಿಡಿದು ಹೋಗಿತ್ತು. ಆಗ ಅವಳು ಅದನ್ನು ತನ್ನ ಕೈಯಲ್ಲಿ ಹಿಡಿದುಕೊಂಡು:—"ನೀವು ಇದನ್ನು ಅವಳಿಗೇಕೆ ಕೊಡಲಿಲ್ಲ?"

ಚಂದ್ರಕಾಂತನ ಬಾಡಿದ ಮುಖದಲ್ಲಿ ಒಮ್ಮೆಲೆ ಸ್ವಾಭಾವಿಕವಾದ ನಗೆಯು ಕಾಣಿಸಿಕೊಂಡಿತು; ಹಾಗು ಆತನ ಕಣ್ಣುಗಳಲ್ಲಿ ನಿಸ್ಸೀಮವಾದ ಪ್ರೇಮವು ಮಿನುಗಹತ್ತಿತು. ಆದರೂ ಆತನು ಆತ್ಮಸಂಯಮನವನ್ನು ಮಾಡಿಕೊಂಡು:—"ಶಾರದೆ, ನಾನು ಈ ಸರವನ್ನು ಅವಳಿಗೇ ಕೊಟ್ಟಿರುತ್ತೇನೆ."

ಶಾರದೆಗೆ ಚಂದ್ರಕಾಂತನ ಮಾತಿನ ಅರ್ಥವು ಸ್ಪಷ್ಟವಾಗಿ ತಿಳಿಯಲಿಲ್ಲ. ಕೆಲ ಕ್ಷಣಗಳ ವರೆಗೆ ಸಂದಿಗ್ಧ ದೃಷ್ಟಿಯಿಂದ ಗಂಡನ ಮುಖದ ಕಡೆಗೆ ಎವೆ

ಯಿಕ್ಕದೆ ನೋಡಿ, ಬಳಿಕ ಅವಳು ಮೃದು ಸ್ವರದಿಂದ:—"ನಾಥ, ನಾನು ತಮ್ಮ ಎರಡನೆಯ ಹೆಂಡತಿಯ ಬಗ್ಗೆ ಕೇಳಿದೆನು. ನೀವು ಈ ಕೀಲೀ ಕೈಗಳ ಸರವನ್ನು ನಿಮ್ಮ ಆ ಎರಡನೆಯ ಹೆಂಡತಿಯ ಕಡೆಗೆ ಏಕೆ ಕೊಡಲಿಲ್ಲ?"

ಚಂದ್ರಕಾಂತನಿಂದ ಇನ್ನು ಮನಸ್ಸು ಬಿಗಿ ಹಿಡಿಯುವದಾಗಲಿಲ್ಲ. ಕೂಡಲೆ ಶಾರದೆಯನ್ನು ತನ್ನ ಎರಡೂ ಕೈಗಳಿಂದ ಜಗ್ಗಿ ಅವಚಿಕೊಂಡು: "ಶಾರದೆ, ನಾನು ಇದನ್ನು ಅವಳಿಗೇ ಕೊಟ್ಟಿರುತ್ತೇನೆ; ಶಾರದೇ, ಅವಳಿಗೇ ಕೊಟ್ಟಿರುತ್ತೇನೆ. ನನಗೆ ಇಬ್ಬರು ಹೆಂಡಂದಿರಿಲ್ಲ, ಒಬ್ಬಳೇ ಇರುತ್ತಾಳೆ; ಆದರೆ ಇವಳು ನನ್ನ ಮೊದಲಿನ ಹೆಂಡತಿಯಲ್ಲ. ಇವಳು ಯಾವಾಗಲೂ ಹೊಸಬಳೇ ಸರಿ! ನಾನು ಮೊದಲು ಇವಳನ್ನು ಈ ಕಾಶೀಕ್ಷೇತ್ರದಲ್ಲಿಯ ಶ್ರೀ ವಿಶ್ವೇಶ್ವರನ ಪ್ರಸಾದದ ಹೂವೆಂದು ತಿಳಿದು ವರಿಸಿಕೊಂಡು ಹೋಗಿದ್ದೆನು; ಅಂದು ಇವಳು ಹೇಗೆ ಹೊಸಬಳಾಗಿದ್ದಳೋ, ಇಂದಾದರೂ ಮತ್ತೆ ಆ ಶ್ರೀ ವಿಶ್ವೇಶ್ವರನ ಪದಧೂಳಿಯಿಂದ ಕೂಡಿಸಿ ಕರೆದೊಯ್ಯುವಾಗಲೂ ಇವಳು ಹಾಗೆಯೇ ಹೊಸಬಳಾಗಿರುತ್ತಾಳೆ!

† § * § †

ಸಾಯಂಕಾಲಕ್ಕೆ ಮನಿಯಲ್ಲೆಲ್ಲ ದೀಪಜ್ಯೋತಿಗಳು ಬೆಳಗಲಾರಂಭಿಸಿದವು. ಪುಟ್ಟ ವಿಶ್ವೇಶ್ವರನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದ ಶಾರದೆಯು ಚಂದ್ರಕಾಂತನ ಬಳಿಯಲ್ಲಿ ಕುಳಿತುಕೊಂಡು:-"ಮಾಬಳಜ್ಜನಿಗೆ ಭೇಟಿಯಾಗದ ಹೊರತು, ನೀವು ಇಲ್ಲಿಂದ ಹೊರಡಕೂಡದು. ಇಂದಿನ ರಾತ್ರಿಯಲ್ಲಿ ನೀವು ಇಲ್ಲಿಯೇ ಇರತಕ್ಕದ್ದು" ಎಂದು ಆಗ್ರಹ ಪೂರ್ವಕವಾಗಿ ಚಂದ್ರಕಾಂತನಿಗೆ ಹೇಳಲು,

"ಹಾಗೆಯೇ ಆಗುವಂತೆ ತೋರುತ್ತಿದೆ; ಯಾಕಂದರೆ, ಈ ಮನೆಯ ಯಜಮಾನನು ಗುಡಿಯಿಂದ ಇದುವರೆಗೂ ಬರಲಿಲ್ಲ."

ಶಾರದೆಯು ಎಷ್ಟೋ ಹೊತ್ತಿನಿಂದ ಚಂದ್ರಕಾಂತನಿಗೆ ಏನನ್ನೋ ಹೇಳಬೇಕೆಂದಿದ್ದಳು; ಆದರೆ ನಾಚಿಕೆಯ ಮೂಲಕ ಹೇಳದಾಗಿದ್ದಳು; ಅಲ್ಲದೆ ಅದನ್ನು ತಿಳಿಸಲು ಸಾಕಷ್ಟು ಏಕಾಂತ ಸಮಯವೂ ಅವಳಿಗೆ ದೊರೆತಿರಲಿಲ್ಲ. ಈಗ ಸಂಧಿ ಸಾಧಿಸಿ ಅವಳು:—"ನಾಥ! ತಮ್ಮ ಬಳಿಯಲ್ಲಿ ಮತ್ತೆ ನಾಚುವದೇಕ........?"

ಏನೇನೋ ಮಾತಾಡಬೇಕೆಂದಿದ್ದ ಚಂದ್ರಕಾಂತನು ಶಾರದೆಯ ಮುಖಲಕ್ಷಣದ ಕಡೆಗೆ ನೋಡಿ ಸುಮ್ಮನಾದನು. ಆಗ ಶಾರದೆಯು:—"ನಾಥ! ತಮಗೊಂದು ಕಾಗದ ಬರೆಯಬೇಕೆಂದು ಆಲೋಚಿಸಿದ್ದೆನು."

"ಬರೆಯುಲಿಲ್ಲೇಕೆ? ಕಾಗದ ಬರೆಯಬೇಡೆಂದು ನಾನು ನಿನ್ನನ್ನೇನೂ ನಿರ್ಬಂಧಿಸಿರಲಿಲ್ಲವಷ್ಟೇ?"

ಶಾರದೆಯು ಕೆಲ ಹೊತ್ತು ಯೋಚಿಸಿ:—"ಅಂಜಿಕೆಯಾಗುತ್ತಿತ್ತು; ಅದನ್ನು ನೋಡಿ ನೀವು ಸಿಟ್ಟಾಗಬಹುದೆಂದು ಅನಿಸುತ್ತಿತ್ತು. ಬರಲಿಕ್ಕೆ ಬರೆದಿದ್ದರೆ ನೀವು ನನ್ನೆಡಗೆ ಬರುತ್ತಿದ್ದಿರಾ?"

"ಬರಬೇಕೆಂದು ಬರೆದಿದ್ದರೆ ಕೂಡಲೆ ಬಂದು ಕಾಣುತ್ತಿದ್ದೆನು."

"ಏನಾಗುತ್ತಿತ್ತೋ ನೋಡುತ್ತಿದ್ದೆನು" ಎಂದು ಶಾರದೆಯು ಒಮ್ಮೆ ತನ್ನ ಮನಸ್ಸಿನಲ್ಲಂದುಕೊಂಡಳು; ಆದರೆ ಉತ್ತರಕ್ಷಣದಲ್ಲಿಯೇ "ಮನುಷ್ಯನ ಮನಸ್ಸಿನ ನೆಲೆಯು ಅದಾರಿಗೆ ತಿಳಿಯುವದು?" ಎಂದು ಭಾವಿಸಿದಳು. "ಈಗಿಲ್ಲದಿದ್ದರೂ ಮತ್ತೆ ಯಾವಾಗಲಾದರೂ ಇವರ ಈ ವಚನವನ್ನು ಪರೀಕ್ಷಿಸುವೆನು; "ಆದರೆ ನನ್ನ ಕಾಗದಕಂಡೊಡನೆಯೇ ಇವರು ಬಂದಾರೆಂದು ಕಲ್ಪಿಸಿದರೂ, ಅದುವರೆಗೆ ನಾನಿನ್ನು ಇರುವದಾದರೂ ಎಲ್ಲಿ?" ಈ ಪ್ರಕಾರವಾಗಿ ಶಾರದೆಯು ಮನಸ್ಸಿನಲ್ಲಿ ನಾನಾ ಬಗೆಯಾಗಿ ಯೋಚಿಸಿ:—"ತಮ್ಮೆದುರಿಗೆ ನನಗೆ ಯಾವದೂ ನಾಚಿಕೆಯೆನಿಸುವದಿಲ್ಲ."

"ಆ ಮಾತಂತೂ ನನ್ನ ಅನುಭವಕ್ಕೆ ಬಂದೇ ಆದೆ. ಮತ್ತೇನಾದರೂ ಹೇಳುವದಿದ್ದರೆ ಬೇಗನೆ ಹೇಳು."

ಕೆಲಕ್ಷಣಗಳ ನಂತರ ಶಾರದೆಯು:—ನಾಥ, ಇನ್ನು ಬದುಕಿರುವ ಇಚ್ಛೆಯು ನನಗಿರುವದಿಲ್ಲ. ಈ ಅವಸ್ಥೆಯಲ್ಲಿ ಬದುಕಿರುವದು ನನಗಂತೂ ಅಸಹ್ಯವೆನಿಸಿದೆ.

ಚೇಷ್ಟೆಗಾಗಿ ಹೀಗೆ ನುಡಿಯದೆ, ನಿಜವಾಗಿಯೇ ಇವಳು ಜೀವಕ್ಕೆ ಬೇಸರಗೊಂಡಿರುವಳೆಂಬದು ಚಂದ್ರಕಾಂತನಿಗೆ ಖಾತ್ರಿಯಾಯಿತು. ಕೂಡಲೆ ಚಂದ್ರಕಾಂತನು ಅವಳನ್ನು ದಿಟ್ಟಿಸಿ ನೋಡಲಾರಂಭಿಸಿದನು. ಅವಳ ಮುಖಮಂಡಲವು ಮತ್ತೆ ವಿಕೃತವಾಗಿ ತೋರಹತ್ತಿತು. ಭಯವಿಹ್ವಲನಾದ ಅವನು ಆಗ:—"ಶಾರದೇ! ನಿನಗೆ ಯಾವದೊಂದು ವಿಶೇಷ ತರಹದ ಬೇನೆಯು ಅಂಟಿಕೊಂಡಿರುವದಿಲ್ಲವಷ್ಟೇ?"

ಶಾರದೆಯು ವಿಷಾದಪೂರ್ಣ ನಗೆನಗುತ್ತ:-"ಅದೇನೋ ನನಗೆ ತಿಳಿಯದು. ಅಂತರಂಗದಲ್ಲಿ ಆಗಾಗ್ಗೆ ಒಂದು ಬಗೆಯ ವ್ಯಥೆಯು ಮಾತ್ರ ಉಂಟಾಗುತ್ತಿರುತ್ತದೆ.

"ಬವಳಿ ಬರುವ ಕಾರಣವೇನು?"

"ವಿಶೇಷವೇನೂ ಇಲ್ಲ."

ಚಂದ್ರಕಾಂತನು ಮನಸ್ಸಿನಲ್ಲಿಯೇ:-ಆಗುವದಾಗಿ ಹೋಗಿದೆ. ಇನ್ನು ಎಲ್ಲ ಬಗೆಯಿಂದಲೂ ಪ್ರಯತ್ನಿಸಿ, ಈಕೆಯ ದೇಹಕ್ಕೆ ಆರೋಗ್ಯವುಂಟಾಗುವಂತೆ ಮಾಡುವೆನು.

ನಂತರ ಶಾರದೆಯು ಕೇವಲ ವಿನಮ್ರಭಾವದಿಂದ:—"ನಾಥ, ನಾನು ತಮ್ಮೆಡೆಯಲ್ಲಿ ಒಂದು ಭಿಕ್ಷೆಯನ್ನು ಬೇಡುವೆನು, ನೀಡುವಿರಷ್ಟೇ?"

"ನೀನು ಬೇಡುವದಾದರೂ ಏನು?"

"ನಾನು ನನ್ನ ಸ್ವಂತಕ್ಕಾಗಿ ಏನೊಂದನ್ನೂ ಇಚ್ಛಿಸುವದಿಲ್ಲ; ಆದರೆ ನಿಮಗೆ ಯಾವಾಗ ನನ್ನ ಮರಣವಾರ್ತೆಯು ತಲುಪುವದೋ ಆಗ.........." ಎಂದಂದು, ಶಾರದೆಯು ವಿಶ್ವನಾಥನನ್ನು ಚಂದ್ರಕಾಂತನ ಪಾದದೆಡೆಯಲ್ಲಿ ಕುಳ್ಳಿರಿಸಿ:—"ಆಗ ನೀವು ಸ್ವತಃ ಇಲ್ಲಿಗೆ ಬಂದು, ಈ ನಿಮ್ಮ ಮಗನನ್ನು ಕರೆದುಕೊಂಡು ಹೋಗಿರಿ........"

ಚಂದ್ರಕಾಂತನು ಒಳ್ಳೇ ಆವೇಗದಿಂದ ವಿಶ್ವನಾಥನನ್ನೆತ್ತಿಕೊಂಡು ಚುಂಬಿಸತೊಡಗಿದನು. ಇದೇ ಕಾಲಕ್ಕೆ ಹೊರಗಿನಿಂದ ವೃದ್ಧ ಮಾಬಳಜ್ಜನು ಮನೆಗೆ ಬಂದು:—"ಅಪ್ಪಾ, ವಿಸು, ಏನು ನಡೆಸಿರುವೆ?" ಎಂದು ಕೇಳಿದನು.

ಕೂಡಲೆ ಪುಟ್ಟ ವಿಶ್ವನಾಥನು ತಂದೆಯ ತೊಡೆಯ ಮೇಲಿಂದ ಚಟಕ್ಕನೆ ಇಳಿದು, ಓಡುತ್ತೋಡುತ್ತ ಅಜ್ಜನ ಬಳಿಗೆ ಹೋಗಿ:—"ಅಜ್ಜಾ, ಅಲ್ಲಿ ನೋಡು; ಅದಾರು ಬಂದಿದ್ದಾರೆ?" ಎಂದಂದು, ನಕ್ಕನು.

ಶಾರದೆಯೂ ಎದ್ದು ನಿಂತು, ಮಾಬಳಜ್ಜನನ್ನು ಕುರಿತು:—"ಅಜ್ಜಾ, ಇಗೋ, ಇವರು ಬಂದಿರುತ್ತಾರೆ!" ಎಂದಳು.

ಮಾಬಳಜ್ಜನು ವಿಶ್ವನಾಥನನ್ನೆತ್ತಿಕೊಂಡು ಒಳಂಗಳಕ್ಕೆಬಂದು ನಿಂತನು. ಕೂಡಲೆ ಚಂದ್ರಕಾಂತನೂ ಹೊರಗೆ ಬಂದನು. ಮಾಬಳಜ್ಜನು ಅವನನ್ನು ಈ ಮೊದಲೆಂದೂ ನೋಡಿರಲಿಲ್ಲ. ಒಂದು ವೇಳೆ ಅಪ್ಪಿತಪ್ಪಿ ಯಾವಾಗಾದರೊಮ್ಮೆ ನೋಡಿದ್ದರೂ ಆತನು ಇವನನ್ನು ಗುರತಿಸಲಾರದವನಾಗಿದ್ದನು. ಅದರಿಂದ ಮಾಬಳಜ್ಜನು ಸುಮ್ಮನೆ ನಿಂತುಕೊಂಡಿದ್ದನು. ಚಂದ್ರಕಾಂತನು ಅಲ್ಲಿಗೆ ಬರಲು, ಪುಟ್ಟ ವಿಶ್ವನಾಥನೇ ಮಾಬಳಜ್ಜನಿಗೆ ಚಂದ್ರಕಾಂತನ ಪರಿಚಯ ಮಾಡಿಕೊಟ್ಟನಲ್ಲದೆ, "ನೋಡು, ಈತನೇ ನಮ್ಮಪ್ಪನು!" ಎಂದು ಚಂದ್ರಕಾಂತನ ಕಡೆಗೆ ಬೊಟ್ಟು ಮಾಡಿ ಮಾಡಿ ತೋರಿಸಿದನು.

ಅಷ್ಟರಲ್ಲಿ ಚಂದ್ರಕಾಂತನೂ ಮಾಬಳಜ್ಜನಿಗೆ ನಮಸ್ಕಾರ ಮಾಡಿ, ನಿಂತುಕೊಳ್ಳಲು, ಮಾಬಳಜ್ಜನು ಆತನನ್ನು ಹರಸುತ್ತ:—"ಬಾರಪ್ಪಾ, ಬಾ!" ಎಂದಂದನು.

---

## ೧೩ನೇ ತರಂಗ:—ತಮ್ಮಾ, ವಿಸು, ಹೊರಡುವೆಯಾ?

ಕೆಲ ಕ್ಷಣಗಳ ವರೆಗೆ ಉಭಯತರಲ್ಲಿ ಯೋಗಕ್ಷೇಮದ ಮಾತು-ಕಥೆಗಳಾದ ನಂತರ ಚಂದ್ರಕಾಂತನು ವೃದ್ಧ ಮಾಬಳಜ್ಜನಿಗೆ:—"ಅಜ್ಜಾ, ನಾಳೆ ನಾನು ಇವರೆಲ್ಲರೊಡನೆ ಊರಿಗೆ ಹೊರಡುತ್ತೇನೆ" ಎಂದಂದನು. ಅದನ್ನು ಕೇಳಿ, ಮಾಬಳಜ್ಜನ ಹೃದಯಮಧ್ಯದಲ್ಲಿ ನೂರಾರು ತೋಫುಗಳು ಒಮ್ಮೆಲೆ ಹಾರಿದಂತಾಯಿತು! ತಾನು ಏನು ಮಾಡುತ್ತಿರುವೆನೆಂಬದು ಆ ಆಘಾತದ ನಿನಾದದಲ್ಲಿ ಅವನದು ಅವನಿಗೇ ಕೇಳಿಸದಾಯಿತು; ಆದರೆ ಚಂದ್ರಕಾಂತನ ಆ ವಾಕ್ಯವನ್ನು ಕೇಳಿ ಅಸ್ಫುಟವಾದ ಅಳುವ ದನಿಯಲ್ಲಿ ಬಹು ದೂರದಿಂದ: "ಈ ಬಗೆಯ ಸೌಖ್ಯವು ಮತ್ತೀತರಲ್ಲಿದೆ?" ಎಂಬ ಶಬ್ದವು ಕೇಳಿಸಿತು. ಅದು ಬಹುಶಃ ಆ ಮನೆಯ ದಾಸಿಯ ನುಡಿಯಾಗಿರಬಹುದು!

ಚಂದ್ರಕಾಂತನ ಆ ಮಾತನ್ನು ಕೇಳಿ ಶಾರದೆಯು ಮಾತ್ರ ಆನಂದ ಪ್ರದರ್ಶನ ಮಾಡಲಿಲ್ಲ. ಅವಳ ಎರಡೂ ಕಣ್ಣುಗಳು ನೀರಿನಿಂದ ತುಂಬಿ ತುಳುಕ ಹತ್ತಿದವು. ಅವಳು ಗಂಡನ ಪಾದಗಳಿಗೆ ವಂದಿಸಿ :—"ಈ ಪಾದಗಳಧೂಲಿಯು ನ್ನರಚಿ, ಈ ಹತಭಾಗಿನಿಯನ್ನು ಇಲ್ಲಿಯೇ ಬಿಟ್ಟು ಹೋಗಬೇಕು; ನನ್ನನ್ನು ಅಲ್ಲಿಗೆ ಕರೆದೊಯ್ಯಬಾರದು" ಎಂದಳು.

"ಅದೇಕೆ?" ಚಂದ್ರಕಾಂತನು ಪ್ರಶ್ನೆ ಮಾಡಲು,

ಶಾರದೆಯು ಆ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡಲಾರದೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು ವೃದ್ಧ ಮಾಬಳಜ್ಜನ ಮುಖಮಂಡಲವು ಅವಳ ಕಣ್ಣಿಗೆ ಕಟ್ಟಿಬಿಟ್ಟಂತಾಯಿತು!

ಕೆಲ ಕ್ಷಣಗಳ ವರೆಗೆ ಸುಮ್ಮನಿದ್ದು, ಬಳಿಕ ಚಂದ್ರಕಾಂತನು:-"ನಾನು ನಿನ್ನ ಗಂಡನು; ನಾನು ನಿನ್ನನ್ನು ಕರೆಯೊಯ್ಯಲಿಕ್ಕೆ ಸಿದ್ಧನಾಗಿರಲು, ನಿನ್ನ ಅಸಮ್ಮತಿಯು ಕೆಲಸದ್ದಲ್ಲ. ನಾನು ಈ ಪುಟ್ಟ ವಿಶ್ವನಾಥನನ್ನು ಬಿಟ್ಟು ಅರೆಕ್ಷಣ ಕೂಡ ಇರಲಾರೆನು."

ಅದಕ್ಕೆ ವಿರುದ್ಧವಾದ ಮತವು ತನ್ನದಿರದ್ದರಿಂದ, ಶಾರದೆಯೂ ಸ್ತಬ್ಧಳಾದಳು.

ಮರುದಿನ ಬೆಳಗಾಗುತ್ತಲೆ ಮಾಬಳಜ್ಜನು ಎಂದಿನಂತೆ ವಿಶ್ವನಾಥನನ್ನೆತ್ತಿಕೊಂಡು ಚದುರಂಗದ ಗಂಟನ್ನೂ ಪಟವನ್ನೂ ತಕ್ಕೊಂಡು, ಶಂಭುರಾಯರ ಮನೆಯ ಕಡೆಗೆ ನಡೆದನು. ದಾರಿಯಲ್ಲಿ ಭೆಟ್ಟಿಯಾದ ಗುರತಿನ ಜನರಿಗೆಲ್ಲ ತನ್ನ ಪುಟ್ಟ ವಿಶ್ವನಾಥನು ಇಂದು ತಮ್ಮಪ್ಪನ ಮನೆಗೆ

ಹೋಗುತ್ತಾನೆಂಬ ಸುದ್ದೀ ಬೀರುತ್ತ ನಡೆದಿದ್ದನು. ಶಂಭುರಾಯರ ಮನೆಗೆ ಹೋದವನೇ ಮಾಬಳಜ್ಜನು ಅವರನ್ನು ಗಟ್ಟಿಗಟ್ಟಿಯಾಗಿ ಕೂಗಿ ಕರೆದು:—"ರಾಯರೇ, ಇಂದು ನನಗೊಳ್ಳೇ ಸುದಿನವೊದಗಿದೆ. ಇಂದು ನಮ್ಮ ಪುಟ್ಟ ವಿಸುವು ತನ್ನ ಸ್ವಂತದ ಮನೆಗೆ ಹೊರಡುತ್ತಾನೆ. ಇನ್ನು ಇವನು ದೊಡ್ಡವನಾದನು. ಆದುದರಿಂದ ತನ್ನ ಮನೆಗೆ ಹೋಗಿರುವದೇ ಒಳಿತು" ಎನ್ನಲು, ಆ ಸುವಾರ್ತೆ ಕೇಳಿ ಶಂಭುರಾಯನಿಗೂ ಸಂತೋಷವೆನಿಸಿತು.

ಬಳಿಕ ಮಾಬಳಜ್ಜನು ಪಟವನ್ನು ಹಾಸಿ, ಚದುರಂಗಗಳನ್ನಿಟ್ಟು, ಶಂಭುರಾಯರನ್ನು ಕುರಿತು:—"ರಾಯರೇ, ಇಂದಿನ ಸುದಿನದಲ್ಲಿ ನಾನು ಮತ್ತೆ ತಮ್ಮೊಡನೆ ಆಡಬಂದಿದ್ದೇನೆ. ಇಂದು ನಿಮಗೆ ಒಂದೆರಡು ಪ್ಯಾದೆಗಳನ್ನು ಕೊಟ್ಟು ಹೋಗಬೇಕೆಂದು ಯೋಚಿಸಿರುತ್ತೇನೆ. ಹೂಂ, ಆಡಲುಪಕ್ರಮಿಸಿರಿ" ಎಂದಂದು, ಒಳ್ಳೇ ಹುರುಪಿನಿಂದ ಆಡಹತ್ತಿದನು; ಆದರೆ ಇಂದು ಅವನು ಪ್ರಾರಂಭದಿಂದಲೇ ಕುದುರೆ ಬಿಡುವಲ್ಲಿ ಒಂಟೆಯನ್ನೂ, ಒಂಟೆ ಬಿಡುವಲ್ಲಿ ಆನೆಯನ್ನೂ, ಆನೆ ಬಿಡುವಲ್ಲಿ ಪ್ಯಾದೆಯನ್ನೂ ಬಿಡಹತ್ತಿ ಅಲ್ಪಾವಕಾಶದಲ್ಲಿಯೇ ತನ್ನ ಕಡೆಯ ಅನೇಕ ಬಾಜಿಗಳನ್ನು ಕಳಕೊಂಡನು. ಇಂದು ಅವನ ಬುದ್ಧಿಯು ತಾಳದಪ್ಪಿತ್ತು. ಅದರಿಂದ ತುಸ ಹೊತ್ತಿನಲ್ಲಿಯೇ ಎಂದೂ ಸೋಲದ ಮಾಬಳಜ್ಜನು ಸೋತು ಬಿಟ್ಟನು! ಕೂಡಲೆ ಆತನು ಪಟವನ್ನು ಎತ್ತಿ, ಚದುರಂಗದ ಗಂಟನ್ನು ಕಟ್ಟಿದನು; ಆದರೆ ವಿಶ್ವನಾಥನ ಅತ್ಯಂತ ಪ್ರೀತಿಯ ಆ ಕೆಂಪುಬಣ್ಣದ ವಜೀರನನ್ನು ಮಾತ್ರ ಗಂಟಿನಲ್ಲಿ ಕಟ್ಟಲಿಲ್ಲ. ಅದನ್ನು ವಿಶ್ವನಾಥನ ಕೈಗಿತ್ತು:—"ತಮ್ಮಾ, ಈ ಮಂತ್ರಿಯನ್ನು ನಿನಗೇ ಕೊಟ್ಟಿರುತ್ತೇನೆ; ಇದನ್ನು ಮರಳಿ ಇಸಕೊಳ್ಳುವ ಇಚ್ಛೆಯು ನನಗಿಲ್ಲ" ಎಂದು ಹೇಳಿ, ವಿಶ್ವನಾಥನೊಡನೆ ತನ್ನ ಮನೆಗೆ ಹಿಂದಿರುಗಿದನು. ಬರುವಾಗ ದಾರಿಯಲ್ಲಿ ಭೆಟ್ಟಿಯಾದವರಿಗೆಲ್ಲ ವಿಶ್ವನಾಥನ ಪ್ರಯಾಣದ ಸಂಗತಿಯನ್ನು ಸಂತೋಷಚಿತ್ತದಿಂದ ತಿಳಿಸಲಿಕ್ಕೆ ಆ ಮುದುಕನು ಮರೆಯಲಿಲ್ಲ.

ಇಂದು ಪ್ರತಿಯೊಂದು ಕೆಲಸದಲ್ಲಿಯೂ ಆ ಮುದುಕನಿಗೆ ಒಳ್ಳೇ ಉತ್ಸಾಹವಾಗುತ್ತಿತ್ತು; ಆದರೆ ಇಂದಿನ ಪ್ರತಿಯೊಂದು ಕೆಲಸದಲ್ಲಿ ಆತನ ತಪ್ಪು-ತಡಿಗಳು ಮಾತ್ರ ಮಿತಿಮೀರಿದವು. ೬೦ ಮೀರಿದ್ದರಿಂದ ಮೊದಲೇ ಅರವು-ಮರವಾಗಿದ್ದ ಅವನಿಗೆ, ಇಂದಿನ ಆ ಸಂತೋಷದ ಸಂಗತಿಯಿಂದ ಮತ್ತಿಷ್ಟು ಅರವು-ಮರವಾಗಲಾರಂಭಿಸಿತು. ವಿಶ್ವನಾಥಾದಿಗಳು ಊರಿಗೆ ಹೊರಡುವ ಕಾಲವು ಹೇಗೆ ಸಮಿ-ಸಮೀಪಿಸಿತೋ, ಹಾಗೆ ಮಾಬಳಜ್ಜನ ಬುದ್ಧಿಭ್ರಂಶವು ಹೆಚ್ಚಾಗ ಹತ್ತಿತು. ಆತನ ಆ ಸ್ಥಿತಿಯನ್ನು ಕಂಡು ಶಿರ

ದೆಯು ನೂರಾರು ಸಾರೆ ಕಣ್ಣೀರು ಹಾಕಿದಳು. ಮಾಬಳಜ್ಜನ ಅರವು-ಮರವು ಹೆಚ್ಚಿದರೂ ಆತನ ಮುಖಮಂಡಲದ ಮೇಲಿನ ಉತ್ಸಾಹವು ಮಾತ್ರ ಶತಗುಣದಿಂದ ಅಧಿಕವಾಗಹತ್ತಿತು. ಹೊರಡುವಾಗ ಶಾರದೆಯು ಆತನನ್ನು ಒಳಗೆ ಕರೆದು, ಅವನ ಪಾದಗಳಿಗೆ ಮೊಡವೊಟ್ಟು ಕಣ್ಣೀರುದುರಿಸ ಹತ್ತಿದಳು. ಆ ಮುದುಕನು ೯,ಂದಿಷ್ಟೂ ದುಃಖಪ್ರದರ್ಶನಗೊಳಿಸದೆ, ಆತ್ಮ ಸಂಯಮನದಿಂದ ದುಃಖವನ್ನು ತಡೆದು, ನಗೆಮೊಗದಿಂದ ಅವಳನ್ನು ಹರಸಿದನು! "ತಂಗೀ, ಶಾರಕ್ಕಾ, ಅಳಬೇಡ; ಪ್ರಯಾಣಕಾಲಕ್ಕೆ ಯಾರೂ ಅಳ ಬಾರದವ್ವಾ!! ತಂಗೀ, ನಿನ್ನೀ ಮುಪ್ಪಿನ ಮುದುಕ-ಅಜ್ಜ-ನ ಆಶೀರ್ವಾದ ದಿಂದ ನೀನು ರಾಜರಾಣಿಯಾಗಿ ಸುಖದಿಂದ ಬಾಳುವೆಯವ್ವಾ!!! ಮತ್ತೆ ಎಂದಾದರೂ ಈ ಕಾಶಿಗೆ ನೀನು ಬಂದುದಾದರೆ, ಈ ನನ್ನ ಮುರಕ ಗುಡಿಸಲಿಗೇ ಬಾ; ಮತ್ತೆಲ್ಲಿಗೂ ಹೋಗಬೇಡ!"

ಮಾಬಳಜ್ಜನ ನುಡಿಯನ್ನು ಕೇಳಿ ಶಾರದೆಯ ದುಃಖವಂತೂ ತಡೆಯಲೇ ಇಲ್ಲ; ಅದು ಮತ್ತಿಷ್ಟು ಹೆಚ್ಚಿತು. ಯಾವ ದಿವಸ ತಾನು ಚಂದ್ರಕಾಂತನಿಂದ ಪರಿತ್ಯಕ್ತಳಾಗಿ ಕಾಶಿಗೆ ಬಂದಿದ್ದೆನೋ, ಹಾಗು ಕೇವಲ ನಿರಾಶ್ರಿತಳಾದ ತನಗೆ ಹರಭಟ್ಟನು ಇನ್ನು ಅರ್ಧಚಂದ್ರ ಕೊಟ್ಟು ದಾರಿಯ ಭಿಕ್ಷುಕಿಯನ್ನಾಗಿ ಮಾಡುತ್ತಿದ್ದನೋ, ಆ ವೇಳೆಯಲ್ಲಿ ಏನೂ ಸಂಬಂಧವಿಲ್ಲದ ಮಾಬಳಜ್ಜನು ತನ್ನನ್ನು ತನ್ನ ಮನೆಗೆ ಎಷ್ಟು ಮಮತೆಯಿಂದ ಕರೆದೊಯ್ದಿದ್ದನೋ ಆ ಪ್ರಸಂಗದ ನೆನಪು ಈಗ ಶಾರದೆಗಾಯಿತು. ಆಗಂತೂ ಆಕೆಯ ದುಃಖಕ್ಕೆ ಭರತಿಯುಂಟಾಯಿತು!

ಕೆಲ ಕ್ಷಣಗಳ ಮೇಲೆ ತನ್ನ ದುಃಖವನ್ನು ನುಂಗಿಕೊಂಡು ಶಾರದೆಯು: "ಅಜ್ಜಾ, ನಮ್ಮನ್ನು ಬಿಟ್ಟು ನೀನಿರಲಾರೆ ಆದುದರಿಂದ ನೀನೂ ನಮ್ಮೊಡನೆ..."

ನಡುವೇ ಬಾಯಿ ಹಾಕಿ ಮಾಬಳಜ್ಜನು:-"ಛೀ-ಛೀ! ತಂಗೀ, ನಾನಿನ್ನು ಬದುಕುವದಾದರೂ ಎಷ್ಟು ದಿನ? ಇಂದೆಂದರೆ ಇಂದೆ, ನಾಳೆಂದರೆ ನಾಳೆಯೇ! ಆದರೆ ತಂಗೀ, ಕೈಲಾಸಪತಿಯ ಕರೆಯು ಬರುವ ವರೆಗೆ ನಾನು ಈ ಕಾಶೀ ಕ್ಷೇತ್ರ ಬಿಟ್ಟು ಚಲಿಸಲಾರೆನು."

ಶಾರದೆಯು ತನ್ನ ಕಣ್ಣೀರೊರೆಸುತ್ತ:—"ಅಜ್ಜಾ, ನಿನಗೆ ನನ್ನ ವಿಷಯಕ್ಕೆ ಕರುಣೆ ಬಾರದೆ?"

ಮಾಬಳಜ್ಜನು ಅವಳನ್ನು ಮತ್ತೆ ಮಾತಾಡಗೊಡದೆ:—"ತಂಗೀ, ಹಾಗೆಂದೆನಬಾರದು. ನನಗೆ ನಿನ್ನ ಅಂತರಂಗವು ಚೆನ್ನಾಗಿ ತಿಳಿದಿದೆ. ನಿನಗೂ ನನ್ನ....." ಆ ಮುದುಕನ ಬಾಯಿಂದ ಮುಂದೆ ಶಬ್ದಗಳೇ ಹೊರಡದಾದವು.

ಅಂದು ರಾತ್ರಿಯ ಹತ್ತು ಗಂಟೆಗೆ ಎಲ್ಲರೂ ಬನಾರಸ ಕ್ಯಾಂಟೋನ ಮೆಂಟ ರೇಲ್ವೇ ಸ್ಟೇಶನ್ನಿಗೆ ಬಂದರು. ಗಾಡಿ ಬರುವ ವೇಳೆಯು ಸಮೀಪಿಸಿತು. ಪುಟ್ಟ ವಿಶ್ವನಾಥನು ಆಗ ಮಾಬಳಜ್ಜನ ಹೆಗಲ ಮೇಲೆಯೇ ಮಲಗಿದ್ದನು; ಆದರೆ ಆ ಕೆಂಪುಬಣ್ಣದ ಮಂತ್ರಿಯು ಮಾತ್ರ ಆಗಲೂ ಆತನ ಕೈಯಲ್ಲೇ ಇದ್ದಿತು. ಗಾಡಿ ಬರುವ ಗಂಟೆಯಾಗಲು, ಮಾಬಳಜ್ಜನು ಹೇಗೆ ಹೇಗೋ ಮಾಡಿ ಅವನನ್ನು ಎಬ್ಬಿಸಿದನು. ಅರೆನಿದ್ದೆಯಲ್ಲಿದ್ದ ಆ ಹುಡುಗನು ಅಳಹತ್ತಿದನು; ಆದರೆ ಅಷ್ಟರಲ್ಲಿ ಮಾಬಳಜ್ಜನು ಅವನ ಮುಖಕ್ಕೆ ತನ್ನ ಮುಖವನ್ನಾನಿಸಿ:-"ತಮ್ಮಾ, ವಿಸು"ಎಂದೆನ್ನಲು, ಆ ಕೂಡಲೆ ವಿಶ್ವನಾಥನು ಚೆನ್ನಾಗಿ ಎಚ್ಚತ್ತು ನಗೆಮೊಗದಿಂದ:-"ಅಜ್ಜಾ-ಅಜ್ಜಾ!" ಎಂದೆನ್ನಲಾರಂಭಿಸಿದನು.

"ತಮ್ಮಾ, ವಿಸು! ನೀನು ಈಗ ಎಲ್ಲಿಗೆ ಹೊರಟಿರುತ್ತೀ" ಎಂದು ಮಾಬಳಜ್ಜನು ಒಳ್ಳೇ ಕೌತುಕದಿಂದ ಪ್ರಶ್ನೆ ಮಾಡಲು,

ವಿಶ್ವನಾಥನು ತನ್ನ ತೊದಲ್ನುಡಿಯಿಂದಲೇ:—"ಅಲ್ಲಿಗೆ ಹೋಗುತ್ತೇನೆ"ಂದು ಹೇಳಿ, ತನ್ನ ತಂದೆಯ ಕಡೆಗೆ ಬೊಟ್ಟು ಮಾಡಿ ತೋರಿಸಿದನು; ಅಲ್ಲದೆ, ಆತನು ತನ್ನ ಕೈಯೊಳಗಿನ ಕೆಂಪು ಬಣ್ಣದ ವಜೀರನನ್ನು ಅಜ್ಜನ ಮುಖದ ಬಳಿಗೆ ಹಿಡಿದು, ಒಳ್ಳೇ ಕುತೂಹಲದಿಂದ:—"ಅಜ್ಜಾ, ಮಂತ್ರಿ-ಮಂತ್ರಿ!" ಎಂದಂದನು.

"ಹೌದು, ತಮ್ಮಾ; ಮಂತ್ರಿಯನ್ನು ಕಳೆಕೊಳ್ಳಬೇಡ ಅsss?" ಮಾಬಳಜ್ಜನು ಚದುರಂಗದಾಟವಾಡುವಾಗ ಮಂತ್ರಿ-ವಜೀರ-ನನ್ನು ಯಾವಾಗಲೂ ಕಳಕೊಳ್ಳಬಾರದೆಂದು ಪುಟ್ಟ ವಿಶ್ವನಾಥನಿಗೆ ಎಷ್ಟೋ ಸಾರೆ ತಿಳಿ ಹೇಳಿದ್ದನು. ಅದರಿಂದ ಅಜ್ಜನ ಆ ನುಡಿಯನ್ನು ಕೇಳಿ ವಿಶ್ವನಾಥನು:—"ಅಜ್ಜಾ, ಮಂತ್ರಿಯನ್ನು ಕಳೆಯುವದಿಲ್ಲ" ಎಂದನು.

ಇಷ್ಟರಲ್ಲಿ ಅವರೆಲ್ಲರೂ ಹೊರಡುವ ಗಾಡಿಯು 'ಫಕ್-ಫಕ್' ಎಂದು ಘೋರವಾದ ಸಪ್ಪಳ ಮಾಡುತ್ತ ಸಿಲ್ಲುಮನೆಯಲ್ಲಿ ಬಂದು ನಿಂತೇ ಬಿಟ್ಟಿತು. ಶಾರದೆಯು ಮಾಬಳಜ್ಜನ ಪಾದಗಳಿಗೆ ಮತ್ತೆ ಮತ್ತೆ ವಂದಿಸುತ್ತ ಗಾಡಿಯನ್ನು ಹತ್ತಿದಳು. ಮಾಬಳಜ್ಜನ ಅಂತರಂಗದಿಂದ ಹೊರಡುತ್ತಿರುವ ಆಶೀರ್ವಾದ ವಚನಗಳು ತುಟಿಯ ವರೆಗೆ ಬಂದು ಬಂದು, ಧ್ವನಿಗೆಯ್ಯದಂತೆ ಅಲ್ಲಿಯೇ ನಿಂತು ಹೋಗುತ್ತಿದ್ದವು.

ಗಾಡಿಯು ಹೊರಡಲಿಕ್ಕೆ ಇನ್ನು ಅವಕಾಶವಿಲ್ಲೆಂಬದನ್ನು ತಿಳಿದು, ಮಾಬಳಜ್ಜನು ಪುಟ್ಟ ವಿಶ್ವನಾಥನನ್ನು ಚಂದ್ರಕಾಂತನ ಕೈಗಿತ್ತು:-"ತಮ್ಮಾ, ವಿಸು!" ಎಂದು ರುದ್ಧಕಂಠದಿಂದ ನಡಿಯಲು,

ಆ ಮಗುವೂ ಅಳುವೊಗದಿಂದ: "ಅಜ್ಜಾ-ಅಜ್ಜಾ!" ಎಂದಂದಿತು.

"ಮಂತ್ರಿಯಿದೆಯೇ?"

ವಿಶ್ವನಾಥನು ತನ್ನ ಕೈಯೊಳಗಿನ ಕೆಂಪು ವಜೀರನನ್ನು ಅಜ್ಜನಿಗೆ ತೋರಿಸುತ್ತ:—"ಅಜ್ಜಾ, ಮಂತ್ರಿ. ಇಗೋ, ಮಂತ್ರಿ!" ಎಂದಂದನು.

"ಮಂತ್ರಿಯನ್ನು ಕಳೆಯಬೇಡಪ್ಪಾ........!"

"ಇಲ್ಲ-ಇಲ್ಲ."

ಅದುವರೆಗೆ ತಡೆದಿದ್ದ ಮಾಬಳಜ್ಜನ ಕಂಬನಿಗಳು ಮಾತ್ರ ಇನ್ನು ತಡೆಯದಾದವು. ಇಷ್ಟರಲ್ಲಿ ಗಾಡಿಯು ಚಲಿಸಿತು. ಮಾಬಳಜ್ಜನು ಶಾರದೆಯು ಕುಳಿತ ಡಬ್ಬಿಯಲ್ಲಿ ಇಣಿಕಿ ನೋಡುತ್ತ:—"ತಂಗೀ, ಹೋಗಿಬಾರವ್ವಾ! ಎಂದು ಹೇಳಿ, ಒಳ್ಳೇ ಗಟ್ಟಿಯಾಗಿ:—"ತಮ್ಮಾ, ವಿಸು! ಹೊರಡುವೆಯಾ?" ಎಂದು ಕೂಗಿ ಕೇಳಿದನು.

ರೈಲಿನ ಸಪ್ಪಳದಲ್ಲಿ ಮಾಬಳಜ್ಜನ ಆ ಕೂಗು ವಿಸುವಿಗೆ ಕೇಳಿಸಿತೋ-ಇಲ್ಲವೋ ತಿಳಿಯದು. ಗಾಡಿಯು ವೇಗದಿಂದ ನಡೆಯಿತು. ಆ ಗಾಡಿಯು ಎಷ್ಟು ಹೊತ್ತಿನ ವರೆಗೆ ಕಾಣಿಸುತ್ತಿತ್ತೋ, ಅಷ್ಟು ಹೊತ್ತಿನ ವರೆಗೂ ಅಲ್ಲಿಯೇ ನಿಂತುಕೊಂಡು, ವೃದ್ಧ ಮಾಬಳಜ್ಜನು ಅದರ ಕಡೆಗೆ ಟಕಮಕವೆಂದು ನೋಡುತ್ತಿದ್ದನು. ಬಳಿಕ ಆತನು ಮಂದಗತಿಯಿಂದ ತನ್ನ ಮನೆಯ ಹಾದೀ ಹಿಡಿದನು.

---

## ೧೪ನೇ ತರಂಗ:—ಸಮಾಜವೆಂದರೇನು?

ಮನೆಗೆ ಹೋದ ಬಳಿಕ ಏನಾಗುವದೋ ಎಂಬ ಕಲ್ಪನೆಯಿಂದ ಚಂದ್ರಕಾಂತನು ಇದುವರೆಗೆ ಅಂತರಂಗದಲ್ಲಿ ಎಷ್ಟು ಅಂಜಿದ್ದನೋ, ಆ ಅಂಜಿಕೆಯು ಈಗ ಮಾರ್ತಂಡಕಕ್ಕನ ಮಾತಿನಿಂದ ಬಯಲಾಯಿತು. ಆಗ ಮಾರ್ತಂಡರಾಯನು ಹೇಳಿದನೇನಂದರೆ:—"ತಮ್ಮಾ, ಚಂದ್ರಕಾಂತಾ, ಪಾಪಕ್ಕಾಗಿ ಪ್ರಾಯಶ್ಚಿತ್ತವನ್ನು ಹೇಳಿರುತ್ತಾರೆ. ಯಾವ ಪಾಪವನ್ನೂ ಮಾಡದ ನೀವು, ಪ್ರಾಯಶ್ಚಿತ್ತವನ್ನು ತಕ್ಕೊಳ್ಳುವ ಕಾರಣವೇನು? ಶಾರಕ್ಕನು ಪಾಪಸಂಬಂಧದ ಯಾವ ಆಚರಣೆಯನ್ನೂ ಮಾಡಿರುವದಿಲ್ಲ; ಅಂದಬಳಿಕ ಅವಳಿಂದ ನಿರರ್ಥಕವಾಗಿ ಪ್ರಾಯಶ್ಚಿತ್ತ ಮಾಡಿಸ ಹೋಗಿ, ನೀನು ಅವಳನ್ನು ಸುಮ್ಮಸುಮ್ಮನೆ ಅವಮಾನಪಡಿಸಬೇಡ" ಮಾರ್ತಂಡರಾಯನ ಬಾಯಿಂದ ಹೊರಟ ಈ ಬಗೆಯ ಅನಪೇಕ್ಷಿತ ನುಡಿಗಳನ್ನು ಕೇಳಿ, ಚಂದ್ರಕಾಂತನು ವಿಸ್ಮಯ ಚಕಿತನಾದನು. ಕೆಲ ಹೊತ್ತಿನ ಮೇಲೆ ಮಾರ್ತಂಡರಾಯನು ಮತ್ತೆ:—

"ಪ್ರತಿಯೊಬ್ಬನ ಸಂಸಾರದಲ್ಲಿ ಒಂದಿಲ್ಲೊಂದು ಬಗೆಯ ನ್ಯೂನತೆಯು ಇದ್ದೇ ಇರುತ್ತದೆಂಬದನ್ನು ನಾನು ನನ್ನ ಅರವತ್ತಾರು ವಯಸ್ಸಿನ ಅನುಭವದಿಂದ ಕಂಡುಕೊಂಡಿರುತ್ತೇನೆ. ಮನುಷ್ಯನು ತನ್ನ ದೀರ್ಘವಾದ ಜೀವನದಲ್ಲಿ ಎಷ್ಟೋ ಬಗೆಯ ದಾರಿಯನ್ನು ಕ್ರಮಿಸಬೇಕಾಗುತ್ತದೆ; ಆ ದಾರಿಯು ಕೆಲವು ಕಡೆಗೆ ಕೊರಕಲು ಬಿದ್ದಿದ್ದರೆ, ಕೆಲವು ಕಡೆಗೆ ಕೆಸರು-ನೀರಿನಿಂದ ತುಂಬಿರುತ್ತದೆ; ಹಾಗು ಬೇರೆ ಕೆಲವು ಕಡೆಗ ತಗ್ಗು-ದಿನ್ನೆಗಳುಳ್ಳದ್ದಾಗಿರುತ್ತದೆ. ಅದಕ್ಕಾಗಿಯೇ ಆ ದಾರಿಯನ್ನು ತುಳಿಯುವವರ ಕಾಲುಗಳು ಆಗಾಗ್ಗೆ ಜಾರುತ್ತಿರುತ್ತವೆ. ಹಾಗೆ ಸ್ಖಲಿತರಾಗುವವರು ತಮ್ಮ ತಪ್ಪನ್ನೆಣಿಸದೆ, ಯಾವಾಗಲೂ ಪರರ ದೋಷಗಳನ್ನೇ ನೋಡುತ್ತಿರುತ್ತಾರೆ. ಎರಡನೆಯವರ ದೋಷಗಳನ್ನೂ ಎರಡನೆಯವರ ಅಪಮಾನದ ಸಂಗತಿಗಳನ್ನೂ ಪ್ರತಿಯೊಬ್ಬರೂ ಕೂಗಿ ಕೂಗಿ ಹೇಳುವ ಕಾರಣವೇನಂದರೆ, ತಮ್ಮ ದೋಷಗಳನ್ನು ಮುಚ್ಚಿಕೊಳ್ಳುವದಕ್ಕೆಂದು." ಆದರೂ ಚಂದ್ರಕಾಂತನು ಏನೊಂದೂ ಉತ್ತರ ಕೊಡದೆ ಸುಮ್ಮನೆ ಕುಳಿತು ಆತನ ಭಾಷಣವನ್ನು ಕೇಳುತ್ತಿದ್ದನು. ಮಾರ್ತಂಡರಾಯನು ಕೆಲ ಕ್ಷಣಗಳ ವರೆಗೆ ಸುಮ್ಮನಿದ್ದು, ಮತ್ತೆ ಹೇಳುತ್ತಾನೆ:—

"ಈ ಸಂಸಾರದಲ್ಲಿ ಇನ್ನೊಂದು ಅತ್ಯವಶ್ಯವಾಗಿ ಕಂಡುಕೊಳ್ಳತಕ್ಕ ಸಂಗತಿಯೆಂದರೆ, ಒಬ್ಬನು ಮತ್ತೊಬ್ಬನನ್ನು ತನ್ನಂತೆ ಮಾಡಿಕೊಳ್ಳಲು ಪ್ರತಿಕ್ಷಣದಲ್ಲಿಯೂ ಪ್ರಯತ್ನಿಸುವನು. ತಾನು ಎಂಥವನೇ ಇರಲಿ; ಲೋಕದವರೆಲ್ಲರೂ ಯವಾಗ ತನ್ನಂತೆ ಆಗುವರೋ, ಎಂಬ ಹವ್ಯಾಸವು ಪ್ರತಿಯೊಬ್ಬ ಮನುಜನಿಗೂ ಇದ್ದೇ ಇರುತ್ತದೆ. ಜಗತ್ತೆಲ್ಲ ಯಾವಾಗ ಸಾಧುಮಯವಾಗುವದೋ, ಎಂದು ಸಾಧುಗಳು ಮಾರ್ಗಪ್ರತೀಕ್ಷಿಸಿದರೆ, 'ರಂಡೆಗೆ ರಂಡೆಯನು ಕಂಡರೆ ಉಂಡಷ್ಟು ಸುಖ!' ಎಂಬಂತೆ ಕಳ್ಳರೂ ದುರ್ಮಾರ್ಗಿಗಳೂ ಆದವರಿಗೆ ಜನರೆಲ್ಲ ಯಾವಾಗ ತಮ್ಮಂತೆ ಆಗುವರೋ, ಆಗಲೆ ಅವರ ಅಂತರಂಗಕ್ಕೆ ನಿಜವಾದ ಸಮಾಧಾನವುಂಟಾಗುವದು. ಈ ದೋಷದಿಂದಲೇ ಪರಮ ನೀಚನಾದ ನಾನು, ನೀನೂ ನನ್ನಂತೆಯೇ ಯಾವಾಗಲಾದೀಯೋ ಎಂದು ಪರಿಪರಿಯಿಂದ ಪ್ರಯತ್ನಿಸುತ್ತಲಿದ್ದೆನು; ಆದರೆ ಚಂದ್ರಕಾಂತಾ, ಆ ನನ್ನ ದುರ್ಗುಣವು ಇಂದು ನನಗೆ ನಿನ್ನ ಮಗನಾದ ಈ ಪುಟ್ಟ ವಿಶ್ವನಾಥನ ದರ್ಶನದಿಂದ ಗೊತ್ತಾಗಿ, ಆ ಬಗ್ಗೆ ನನ್ನಲ್ಲಿ ಪರಮ ಪಶ್ಚಾತ್ತಾಪವುಂಟಾಗಿರುತ್ತದೆ. ಈತನ ಪುಣ್ಯದರ್ಶನದಿಂದ ನನ್ನ ಅಂತರಾತ್ಮನು ಸಮಾಧಾನವನ್ನು ತಾಳಿರುತ್ತಾನೆ. ತಮ್ಮಾ, ಇಂದು ದ್ವಾದಶಿಯು; ನಾಳಿನ ಹುಣ್ಣಿವೆಯ ದಿವಸ ನಿನ್ನ ಮನೆಯಲ್ಲಿ ಒಂದು ಊರೂಟವನ್ನು ಮಾಡಿಸು. ನನ್ನ ಅಣ್ಣ

ನ-ನಿನ್ನ ತಂದೆಯ-ಕಾಲಕ್ಕೆ ಇಂಥ ಊರೂಟಗಳು ನಮ್ಮಲ್ಲಿ ಆಗಾಗ್ಗೆ ಆಗುತ್ತಿದ್ದವು; ಆದರೆ ಈ ಹತಭಾಗ್ಯನಾದ ನಿನ್ನೀ ಮಾರ್ತಂಡಕಕ್ಕನ ಕಾಲಕ್ಕೆ ಆ ನಮ್ಮ ಮನೆಯ ಪೂರ್ವಪದ್ಧತಿಗಳೆಲ್ಲ ನಿಂತು ಬಿಟ್ಟವೆ. ಈ ನಿನ್ನ ವಿಶ್ವನಾಥನ ದರ್ಶನವಿಯೋಗದಿಂದ ಇಂದು ನನಗಾ ಸದ್ವಾಸನೆಯುಂಟಾಗಿದೆ. ಆದ್ದರಿಂದ ಅಂದು ಶ್ರೀ ಕಾಶೀವಿಶ್ವೇಶ್ವರನ ಸಮಾರಾಧನೆಯೆಂದು ಹೇಳಿ, ಊರೊಳಗಿನ ಪ್ರಮುಖರನ್ನೆಲ್ಲ ಊಟಕ್ಕೆ ಕರೆಯೋಣ............"

ಚಂದ್ರಕಾಂತನು ನಡುವೇ ಬಾಯಿ ಹಾಕಿ;—ಕಕ್ಕಾ, ಆದರೆ ಸಮಾಜದವರು ನನಗೆ ಭಹಿಷ್ಕಾರವನ್ನಿಕ್ಕಿರುವರಲ್ಲ! ಅವರು ನನ್ನ ಮನೆಯ ಅನ್ನವನ್ನು ಉಣ್ಣುವ ಬಗೆ ಹೇಗೆ?"

ಅದಕ್ಕೆ ಮಾರ್ತಂಡರಾಯನು ಮುಗುಳ್ನಗೆಯಿಂದ:—"ಸಮಾಜವೆಂದರೇನು-ಸಮಾಜ! ಸಮಾಜವೆಂದರೆ ನಾನು; ಸಮಾಜವೆಂದರೆ ನೀನು. ಈ ಊರಲ್ಲಿ ನಮ್ಮಷ್ಟು ಸ್ಥಿತಿವಂತರು ಅನ್ಯರಾರೂ ಇರುವದಿಲ್ಲ. ಯಾವನಲ್ಲಿ ಸಾಕಷ್ಟು ದುಡ್ಡು ಇವೆಯೋ ಆತನೇ ಸಮಾಜದ ಮುಖ್ಯ ಚಾಲಕನು! 'ದುಡ್ಡೇ ದೊಡ್ಡಪ್ಪ!' ಎಂಬ ನಾಣ್ಣುಡಿಯನ್ನು ಅರಿಯೆಯಾ? ನಾನು ಹಟವನ್ನು ಹಿಡಿದರೆ, ನಿನ್ನ ಜಾತಿ-ಕುಲಗಳನ್ನು ಕೆಡಿಸಿ, ನಿನ್ನನ್ನು ಸಮಾಜದಿಂದ ಚ್ಯುತಿಗೊಳಿಸಬಲ್ಲೆನು; ಅದರಂತೆ ನೀನು ಹಟ ತಾಳಿದರೆ, ನನ್ನ ಸರ್ವನಾಶಕ್ಕೂ ಕಾರಣನಾಗುವೆ. ಸಮಾಜಕ್ಕಾಗಿ ಅಂಜಬೇಡ. ನಿನಗೆ ಇನ್ನೊಂದು ಮಾತು ತಿಳಿಸುವೆನು; ಇದುವರೆಗೆ ನಾನು ಅದನ್ನು ಬೇಕೆಂತಲೇ ನಿನಗೆ ತಿಳಿಸಿರಲಿಲ್ಲ. ಆ ಸಂಗತಿಯನ್ನು ನಿನಗೆ ಕಡೆತನಕ ತಿಳಿಸಬಾರದೆಂದು ನಾನು ಮನಸಾ ಯೋಚಿಸಿದ್ದೆನು; ಆದರೆ ಅದನ್ನು ನಿನಗೆ ತಿಳಿಸುವದರಿಂದ ಇನ್ನು ಯಾವ ಅನಿಷ್ಟವೂ ಒದಗವೆ, ಇಷ್ಟವೇ ಆದೀತೆಂದು ಇಂದು ನನಗೆ ಅನಿಸಿರುತ್ತದೆ. ತಮ್ಮಾ, ಚಂದ್ರಕಾಂತಾ, ನಿನಗೆ ಆ ವೈಶ್ಯರ ರಾಮಣ್ಣನು ಗೊತ್ತಿರುವನೇನು?"

"ಗೊತ್ತಿರವೇನು ಮಾಡೀತು? ಆತನು ಕಾಶಿಯ ಹರಭಟ್ಟನಿಂದ ತಂದ ಪತ್ರದಿಂದಲೇ ಅಲ್ಲವೇ, ಇಷ್ಟೆಲ್ಲ ವಿತುಷ್ಟತೆಯುಂಟಾದದ್ದು?"

"ನನ್ನ ತಪ್ಪುಗಳಲ್ಲಿ ಪ್ರಾಮುಖ್ಯವಾದ ತಪ್ಪೆಂದರೆ, ನಾನು ಆ ನೀಚನು ತಂದ ಆ ಪತ್ರದ ಸಂಗತಿಯನ್ನು ಸಿದ್ಧಗೊಳಿಸುವದಕ್ಕೆ ಪ್ರಯತ್ನಿಸಿದುದು; ಆದರೆ ತಮ್ಮಾ, ಅವನು ಇನ್ನು ಈ ಊರಿಗೆ ಎಂದಿಗೂ ಬರಲಾರನು; ಹಾಗು ಯಾವ ಸಂಗತಿಯ ಬೊಬ್ಬಾಟವನ್ನೂ ಮಾಡಲಾರನು. ಯಾಕಂದರೆ ನಾನು ಅವನನ್ನು ನಂಬಿ ಮೊದಲು ಅವನಿಗೆ ಹೇಗೆ ಸಹಾಯಕನಾಗಿದ್ದೆನೋ, ನನ್ನ

ಮನಸ್ಸು ಪರಿವರ್ತನ ಹೊಂದಲು, ನಾನು ಅವನನ್ನು ಪ್ರಯತ್ನಪೂರ್ವಕ ವಾಗಿ ಸೆರೆಮನೆಯ ಸೋಬತಿಯನ್ನಾಗ ಮಾಡಿರುವೆನು. ಕೆಲ ದಿನಗಳ ಹಿಂದೆ ಆತನು ಆ ಕಾರಾಗೃಹದಿಂದ ಮುಕ್ತನಾಗಿದ್ದರೂ, ಆತನು ಇಲ್ಲಿಗೆ ಬಂದು ಇನ್ನೆಂದೂ ಅಂಥ ಉಸಾಬರಿಗೆ ತೊಡಗಲಾರನು."

ಬಳಿಕ ಮಾರ್ತಂಡರಾಯನು ಈ ಮಧ್ಯದಲ್ಲಿ ವೈಶ್ಯರ ರಾಮಣ್ಣನ ಬಗ್ಗೆ ನಡದ ಸಂಗತಿಗಳನ್ನೆಲ್ಲ ಚಂದ್ರಕಾಂತಾದಿಗಳಿಗೆ ವಿಶದವಾಗಿ ತಿಳಿಸಿದನು. ಅದನ್ನೆಲ್ಲ ಕೇಳಿ, ಚಂದ್ರಕಾಂತನಿಗೆ ಪರಮ ಖೇದವೆನಿಸಿತು.

ಹುಣ್ಣಿವೆಯ ದಿವಸ ಚಂದ್ರಕಾಂತನ ಮನೆಯಲ್ಲಿ ಕಾಶೀ ಸಮಾರಾಧನೆಯು ಸಂಪೂರ್ತಿಗೊಂಡಿತು. ಊರೊಳಗಿನ ಯಾವ ಪ್ರಮುಖರೂ ಚಕಾರವನ್ನುಚ್ಚರಿಸದೆ, ಚಂದ್ರಕಾಂತನಲ್ಲಿ ಆದರಾತಿಥ್ಯವನ್ನು ಕೈಕೊಂಡು ಸಮಾಧಾನ ತಾಳಿದರು. ಮಾರ್ತಂಡರಾಯನೇ ಚಂದ್ರಕಾಂತನ ವಿಷಯವಾಗಿ ಇಷ್ಟೊಂದು ಭೇದರಹಿತನಾಗಿ ನಡೆಯುವದನ್ನು ನೋಡಿ, ಇದುವರೆಗೆ ಚಂದ್ರಕಾಂತನನ್ನು ಯಾವುದೊಂದು ಸುಳ್ಳು ಅಪವಾದವು ಮುತ್ತಿತ್ತೆಂದು ಅವರೆಲ್ಲರೂ ತಿಳಿದರಲ್ಲದೆ, ಶ್ರೀಮಂತರಿಗೂ ಘನವಂತರಿಗೂ ಆಗದ ಜನರು ಇಂಥ ದುರ್ವಾರ್ತೆಗಳನ್ನು ಆಗಾಗ್ಗೆ ಹುಟ್ಟಿಸುತ್ತಿರುತ್ತಾರೆಂದೂ ಅವರು ಅಂದುಕೊಂಡರು.

ಊರ ಜನರಾರೂ ಶಾರದೆಗೆ ಇಲ್ಲವೆ ಚಂದ್ರಕಾಂತನಿಗೆ ಬಹಿಷ್ಕಾರವ ಹಾಕದಿದ್ದರೂ; ಶಶಿಮುಖಿಯು ಮಾತ್ರ ಅವರ ಮನೆಯಲ್ಲಿ ಉಣ್ಣಲಾರದೆ ಬೇರೆ ಕಡೆಗೆ ಅಡಿಗೆ ಮಾಡಿಕೊಂಡು ಉಂಡಳು; ಹಾಗು ತಾನು ಇನ್ನು ಈ ಭ್ರಷ್ಟಾಕಾರದಲ್ಲಿರಲಾರೆನೆಂದೂ, ತಾನು ತನ್ನ ಗಂಡನೊಡನೆ ಊರಿಗೆ ಹೊರಡುವೆನೆಂದೂ ಹಟ ಹಿಡಿದಳು. ಚಂದ್ರಕಾಂತನು ಆಕೆಗೆ ಬಗೆಬಗೆಯಾಗಿ ಬೇಡಿಕೊಂಡರೂ ಕೇಳದೆ, ಅವಳು:-"ಜೀವ ಹೋದರೂ ಚಿಂತೆಯಿಲ್ಲ; ಆದರೆ ಈ ಅಧರ್ಮದಲ್ಲಿ-ಈ ಭ್ರಷ್ಟಾಕಾರದಲ್ಲಿ-ನಾನಿರಲಾರೆನೆ"ಂದು ಕಟ್ಟುನಿಟ್ಟಾಗಿ ತಿಳಿಸಿದಳು.

ಸಂತೋಷದಿಂದಲೇ ಆಗಲಿ, ದುಃಖದಿಂದಲೇ ಆಗಲಿ, ಚಂದ್ರಕಾಂತನು ಅವಳ ಐವತ್ತರ ಮಾಸಾಶನವನ್ನು ಹೆಚ್ಚಿಸಿ ನೂರರಂತೆ ಮಾಡಿ, ಅವಳನ್ನು ಕಳಿಸಿಬಿಟ್ಟನು! ತನ್ನ ಅನ್ನದಿಂದ ಪಾಲನ ಪೋಷಣೆಗೊಳ್ಳುತ್ತಿದ್ದ ಆ ತನ್ನ ಸೋದರತ್ತೆ-ಸೋದರಮಾವಂದಿರಿಗೆ ಹೀಗೆಯೇ ನಡೆಯಬೇಕೆಂದು ಆತನು ಬಲಾತ್ಕರಿಸಲಿಲ್ಲ!

———

೧೫ನೇ ತರಂಗ:—**ವಿಸು, ಮಂತ್ರಿಯಿಲ್ಲದೆ ನನ್ನಾಟ ಸಾಗಲಾರದು!**

ಯಾವ ರಾತ್ರಿಯಲ್ಲಿ ಮಾಬಳಜ್ಜನು ಸ್ಟೇಶನ್ನಿನಿಂದ ಮೆಲ್ಲನೆ ಹಿಂದಿರುಗಿದನೋ, ಆಗಲೂ ಆತನ ಮನೆಯ ಮುಂದಿನ ತುಳಸೀ ಕಟ್ಟೆಯೊಳಗಿನ ದೀಪವು ಮಂದಮಂದವಾಗಿ ಉರಿಯುತ್ತಿತ್ತು; ಆದರೂ ಸುತ್ತಲೂ ಭೀಕರವಾದ ಅಂಧಃಕಾರವು ಮುಸುಕಿತ್ತು. ಆಗ ಆ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಒಂದು ಮಣ್ಣು ಪಣತಿಯು ಇನ್ನೂ ಸಣ್ಣಾಗಿ ಉರಿಯುತ್ತಿತ್ತು. ಎಣ್ಣೆ ತೀರಿದ್ದರಿಂದ ಅದರ ಆಯುಃಷ್ಯವೂ ಮುಗಿಯುತ್ತ ಬಂದಿತ್ತು. ಆ ದೀಪವನ್ನು ಶಾರದೆಯು ಸ್ವಹಸ್ತದಿಂದ ಹಚ್ಚಿ ಹೋಗಿದ್ದಳು. ಅದು ಆರುವದರೊಳಗಾಗಿ ತಾನು ಮನೆಗೆ ಬಂದಂದಕ್ಕಾಗಿ ಮಾಬಳಜ್ಜನಿಗೆ ಮಿಗಿಲಾದ ಆನಂದವಾಯಿತು.

ಆತನು ಒಳಗೆ ಹೋಗಿ ಹಾಸುಗೆಯ ಮೇಲೆ ಮಲಗಿದನು. ಅಪರಾತ್ರಿಯಾದ್ದರಿಂದ ಆತನ ಕಣ್ಣಿಗೆ ಮುಬ್ಬು ಬಂದಿತು; ಆದರೆ ಆತನ ಕಿವಿಯಲ್ಲಿ ಮಾತ್ರ 'ಅಜ್ಜಾ-ಅಜ್ಜಾ!' ಎಂಬ ಶಬ್ದವು ಆಗಾಗ್ಗೆ ಕೇಳಬರುತ್ತಿತ್ತು. ಆ ತಂದ್ರಾವಸ್ಥೆಯಲ್ಲಿ ಮಾಬಳಜ್ಜನಿಗೆ ಒಂದು ವಿಚಿತ್ರವಾದ ಸ್ವಪ್ನವು ಬಿದ್ದಿತು: "ಭರತರಾಜನು ಮೃಗಶಿಶುವಿನ ಮೋಹದಿಂದ ಜರ್ಜರನಾಗಿ ಮೃತ್ಯುಶಯ್ಯೆಯ ಮೇಲೆ ಮಲಗಿಕೊಂಡು ಕ್ಷೀಣ ಸ್ವರದಿಂದ 'ಮಗೂ, ಬೇಗ ಬಾ; ಬೇಗನೆ ತಿರುಗಿ ಬಂದು ನನಗೆ ಭೆಟ್ಟಿಕೊಡು' ಎಂದೆನ್ನುವಂತೆ ತೋರಿತು."

ಬೆಳಗಾಗುತ್ತಲೆ ಹಾಸುಗೆಯಿಂದೆದ್ದು ಹೊರಗೆ ಬಂದು ಆತನು ತನ್ನ ನಿತ್ಯಕ್ರಮದಂತೆ:—"ತಮ್ಮಾ, ವಿಸು! ಅಪ್ಪಾ, ವಿಸು!!" ಎಂದು ಕರೆದನು. ಎಷ್ಟೋ ಹೊತ್ತಿನ ಮೇಲೆ ವಿಶ್ವನಾಥನು ತನ್ನ ತಂದೆ-ತಾಯಿಗಳೊಡನೆ ತಮ್ಮೂರಿಗೆ ಹೊರಟು ಹೋಗಿರುವನೆಂಬದು ಆತನಿಗೆ ಸ್ಮರಣವಾಯಿತು.

ಹೊತ್ತೇರುತ್ತಲೆ ಅವನು ಚದುರಂಗದ ಗಂಟನ್ನೂ ಪಟವನ್ನೂ ತಕ್ಕೊಂಡು ಶಂಭುರಾಯರ ಮನೆಗೆ ಹೋಗಿ:—"ರಾಯರೇ, ನಮ್ಮ ಪುಟ್ಟ ವಿಸುವು ತಮ್ಮೂರಿಗೆ ಹೋಗಿ ಬಿಟ್ಟನಲ್ಲ!" ಎಂದು ತಿಳಿಸಿದನು. ವಿಶ್ವನಾಥನನ್ನು ಆ ಓಣಿಯವರೆಲ್ಲರೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಆದ್ದರಿಂದ ಆ ಸಂಗತಿಯನ್ನು ಕೇಳಿ ಶಂಭುರಾಯನು ವಿಷಾದಗೊಂಡನು. ಮಾಬಳಜ್ಜನು ಆಟ ಹೂಡಿದ ಕೂಡಲೆ ಶಂಭುರಾಯ ಕೇಳುತ್ತಾನೆ:-"ಅಜ್ಜಾ, ನಿಮ್ಮ ಆ ಕೆಂಪು ವಜೀರನೆಲ್ಲಿ?"

ನಿಟ್ಟುಸಿರುಗರೆದು ಮಾಬಳಜ್ಜನು:—"ರಾಯರೇ, ಅದನ್ನು ಅವನೇ ಒಯ್ಕೊಂಡು ಹೋಗಿರುತ್ತಾನೆ. ಆ ಕೆಂಪು ಮಂತ್ರಿಯನ್ನು ವಿಶ್ವನಾಥನು

ಬಹು ಪ್ರೀತಿಸುತ್ತಿದ್ದನೆಂಬದು ನಿಮಗರಿಯದ ವಿಷಯವಲ್ಲ. ಅದರಿಂದ ಆ ಹುಡುಗನು ಅದನ್ನು ಬಿಡಲೇ ಇಲ್ಲ" ತಾನಾಗಿಯೇ ತನ್ನ ಪ್ರೀತಿಯ ಆ ಚದುರಂಗದ ದಳವನ್ನು ಅಂಗಹೀನವನ್ನಾಗಿ ಮಾಡಿದ್ದನ್ನು ಹೇಳುವದಕ್ಕೆ ವೃದ್ಧ ಮಾಬಳಜ್ಜನಿಗೆ ಬಲು ನಾಚಿಕೆಯೆನಿಸಿತು.

"ಹಾಗಾದರೆ ಅಜ್ಜಾ, ಇನ್ನು ಈ ಚದುರಂಗಗಳು ನಿರುಪಯುಕ್ತ ವಾದವು. ಇವುಗಳನ್ನು ಬಿಟ್ಟು ಬೇರೆ ಜೊತೆಯನ್ನಿಡೋಣ" ಎಂದು ಶಂಭು ರಾಯರು ಅನ್ನಲು,

"ಆಗಲಿ!" ಮಾಬಳಜ್ಜನು ಜೋಲು ಮೋರೆಯಿಂದ ಹೇಳಿದನು.

ಅಂದಿನ ಆಟದಲ್ಲಿ ಮಾಬಳಜ್ಜನೇ ಸೋತನು! ಶಂಭುರಾಯನು ಆತ ನೊಡನೆ ಬಹು ದಿನಗಳಿಂದ ಆಡಿದ್ದರೂ ಅವನನ್ನು ಸೋಲಿಸಲಿಕ್ಕೆ ಎಂದೂ ಸಮರ್ಥನಾಗಿರಲಿಲ್ಲ. ಅದರಿಂದ ಅಂದಿನ ಮಾಬಳಜ್ಜನ ಅಪಜಯದ ಕಾರ ಣವು ಆತನಿಗೆ ಸಹಜವಾಗಿಯೇ ಗೊತ್ತಾಗಲು ಆತನು:—"ಅಜ್ಜಾ, ಪುಟ್ಟ ವಿಸುವು ತನ್ನೂರಿಗೆ ಹೋಗಿದ್ದರಿಂದ ನಿನ್ನ ಮನಸ್ಸು ಸ್ಥಿರವಾಗಿರುವದಿಲ್ಲ. ಅದರಿಂದ ಇನ್ನು ಆಟವು ಸಾಕುಬಿಡು" ಎಂದನು.

ಮುಂದೆ ಕೆಲ ದಿನಗಳ ವರೆಗೆ ಆತನು ಯಾರೊಡನೆಯೂ ಆಟವಾಡ ಲಿಲ್ಲ. ಒಂದು ವೇಳೆ ಆಟಕ್ಕೆ ಕುಳಿತರೂ ಅವನು ನಡುವೇ.—"ತಮ್ಮಾ, ವಿಸು! ನನ್ನ ಆ ಕೆಂಪು ವಜೀರನನ್ನು ಕೊಡು ನೋಡೋಣ. ಆ ಮಂತ್ರಿ ಇಲ್ಲದಿದ್ದರೆ ನನ್ನ ಆಟವೇ ಆಗಲಾರದು" ಎಂದು ಭ್ರಾಂತಿಷ್ಟನಂತೆ ನುಡಿಯು ವನು. ಅದನ್ನು ಕೇಳಿ ಕೆಲವರು ನಗುವರು; ಕೆಲವರು ಅಜ್ಜನ ಬಗ್ಗೆ ಕನಿ ಕರ ಪಡುವರು; ಬೇರೆ ಕೆಲವರು ವಿಶ್ವನಾಥನ ನೆನಪು ಮಾಡಿಕೊಂಡು ಕಣ್ಣೀರುದುರಿಸುವರು!

ಮಾಬಳಜ್ಜನಂತಹ ಪ್ರಸಿದ್ಧ ಚದುರಂಗದಾಟಗಾರನು ಆ ಕಾಶೀಕ್ಷೇತ್ರ ದಲ್ಲಿಯೇ ಇರಲಿಲ್ಲ; ಆದರೆ ಇತ್ತೀಚೆಗೆ ಆತನಿಗೆ ಒಂದು ಬಗೆಯ ಭ್ರಾಂತಿಯು ಆವರಿಸಿದ್ದರಿಂದ, ಆತನ ಆ ಆಟದ ಲಕ್ಷ್ಯ ಮಾಯವಾಗಿ ಬಿಟ್ಟಿತ್ತು!"

ಮಾಬಳಜ್ಜನು ಮನೆಗೆ ಬಂದು ನೋಡುತ್ತಾನೆ, ದಾಸಿಯ ಹೊರತು ಮನೆಯಲ್ಲಿ ಯಾರೂ ಇರಲಿಲ್ಲ. ಎತ್ತ ನೋಡಿದರೂ ತಾನೊಬ್ಬನೇ ಹೊರತು ಬೇರೆ ಯಾರೂ ಇಲ್ಲ. ಅಡುಗೆಯ ಮನೆಗೆ ಹೋಗುತ್ತಾನೆ, ದಾಸಿಯು ಒಬ್ಬನ ಅಡಿಗೆಯ ಸಾಮಾನುಗಳನ್ನು ಸಿದ್ಧಪಡಿಸಿಟ್ಟಿರುವಳು. ಒಳಗೆ ಹೊರಗೆ ಎಲ್ಲಿ ಹೋದರೂ ಆತನಿಗೆ ವಿಶ್ವನಾಥನ ದರ್ಶನವಾಗಲಿಲ್ಲ. ಆಗ ಆತನು ಮತ್ತೆ ಭ್ರಾಂತಿಯಿಂದ:--"ತಮ್ಮಾ, ವಿಸು! ಎಲ್ಲಿರುವೆ? ಬೇಗ ಬಾ" ಎಂದು ಪುನಃ

ಪುನಃ ಕೂಗಹತ್ತಲು, ದಾಸಿಯು ಅದನ್ನು ಕೇಳಿ ಅಂತರಂಗದಲ್ಲಿ ಆ ಮುದುಕನ ಬಗ್ಗೆ ಕನಿಕರಪಟ್ಟರೂ ಬಹಿರಂಗದಲ್ಲಿ:—"ಅಜ್ಜಾ, ಇದೇನು, ಹುಚ್ಚು ಹಿಡಿದವರ ಹಾಗೆ ಮಾಡುವಿರಿ? ನಡೆಯಿರಿ, ಬೇಗನೆ ಸ್ನಾನ ಮಾಡಿ ಅಡಿಗೆ ಮಾಡಿಕೊಳ್ಳಿರಿ. ತಡವಾಗುವದಿಲ್ಲವೆ?" ಎಂದು ಅನ್ನಲು, "ಹಾಗೋ, ಹಾಗೆಯೇ ಆಗಲಿ! ಆ ಪೋರನು ನನ್ನನ್ನು ಬಿಟ್ಟುಹೋದನೆ? ಹೋಗಲಿ ಬಿಡು. ಅವನು ನನ್ನನ್ನು ಆಗಾಗ್ಗೆ ಕಾಡುತ್ತಿದ್ದನು. ಹೋದದ್ದೇ ಒಳಿತಾಯಿತು" ಎಂದು ಏನೇನೋ ಒಟಗುಟ್ಟುತ್ತ ತನ್ನ ನಿತ್ಯಕರ್ಮಕ್ಕೆ ತೊಡಗುತ್ತಿದ್ದನು.

ಶಾರದೆಯು ಹೊರಟು ಹೋದ ೧೫-೨೦ ದಿನಗಳಿಗೆ ಅವಳಿಂದ ಮಾಬಳಜ್ಜನ ಹೆಸರಿಗೆ ಕ್ಷೇಮಸಮಾಚಾರದ ಒಂದು ಕಾಗದ ಬಂತು. ಅದರಲ್ಲಿ: ವಿಸುವು ನಿಮ್ಮನ್ನು ಆಗಾಗ್ಗೆ ನೆನಿಸುತ್ತಿರುವನು!" ಎಂಬ ವಾಕ್ಯವಿದ್ದಿತು! ಆ ಕಾಗದ ಬಂದಾಗಿನಿಂದ ಮಾಬಳಜ್ಜನು ಅದನ್ನು ಒಂದೇಸವನೆ ಪಾರಾಯಣ ಮಾಡುತ್ತಿದ್ದನು; ಮನೆಗೆ ಬಂದವರಿಗೆಲ್ಲ ಆತನು ಅದನ್ನು ಓದಿ-ಓದಿ ತೋರಿಸುತ್ತಿದ್ದನು. ಅಂದಿನಿಂದ ಆತನಿಗೆ ಬೇರೆ ವಿಷಯಗಳೇ ರುಚಿಸದಾದವು.

ಮುಂದೆ ಕೆಲ ದಿನಗಳಲ್ಲಿಯೇ ಆತನಿಗೆ ಕಟ್ಟುಜ್ವರದ ಉಪದ್ರವವಾಯಿತು. ದಾಸಿಯ ಹೊರತು ಆತನ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಮೊದಮೊದಲು ವಿಶೇಷ ಉಪಚಾರಗಳೇನೂ ನಡೆಯಲಿಲ್ಲ. ಕಡೆಗೆ ಅಜ್ಜನ ಆ ರೋಗದ ಸಂಗತಿಯನ್ನು ದಾಸಿಯು ಶಂಭುರಾಯರಿಗೆ ತಿಳಿಸಲು, ಅವರು ವೈದ್ಯನೊಡನೆ ಅಲ್ಲಿಗೆ ಬಂದರು; ಹಾಗು ವೈದ್ಯನಿಗೆ ಮಾಬಳಜ್ಜನ ಪ್ರಕೃತಿಯನ್ನು ನೋಡ ಹೇಳಿದರು.

ಶಂಭುರಾಯರನ್ನು ಕಂಡ ಕೂಡಲೆ ಮಾಬಳಜ್ಜನು ತನ್ನ ತಲೆಗಿಂಬಿನ ಕೆಳಗಿಟ್ಟಿದ್ದ ಪುಟ್ಟ ವಿಶ್ವನಾಥನ ಕಾಗದವನ್ನು ತೆಗೆದು, ದಾಸಿಯಿಂದ ದೀಪವನ್ನು ಹಿಡಿಸಿಕೊಂಡು ಆ ಪತ್ರವನ್ನು ಮೂರು-ಮೂರು ಸಾರೆ ಓದಿ ತೋರಿಸಿದನು. ಓದುವಾಗಿನ ಆತನ ಹಾವ-ಭಾವ, ಮುಖಚರ್ಯೆ ಇವುಗಳನ್ನು ನೋಡಿದವರಿಗೆ ಈತನಿಗೆ ಏನೂ ಬೇನೆಯಾಗಿಲ್ಲವೆಂದು ಸಹಜವಾಗಿ ಕಂಡು ಬರುವಂತಿತ್ತು.

ವೈದ್ಯನು ಮಾಬಳಜ್ಜನ ನಾಡಿ ನೋಡಿ: "ಇವನಿಗೆ ಕಟ್ಟು ಜ್ವರ ಬರುತ್ತಿವೆ. ಈತನನ್ನು ಕೊಂಚವು ಮಾತಾಡಗೊಡಬಾರದು; ಚಲಿಸಗೊಡಬಾರದು ಅಂದರೆ ನಾನು ಈತನಿಗೆ ಔಷಧಕೊಡುವೆನೆ"ಂದನು.

ಮಾಬಳಜ್ಜನು ಅದಕ್ಕೊಪ್ಪದೆ:--"ನನಗೇನು? ಎಂಭತ್ತು ವರ್ಷ ಮುಗಿಯಬಂದಿವೆ. ನಿಮ್ಮ ಔಷಧೋಪಚಾರದಿಂದ ನನಗೇನಾಗಬೇಕಾಗಿದೆ? ನನಗೆ

ಶ್ರೀ ಕೈಲಾಸನಾಥನ ಕರೆಯುಬಂದಿಪೆ ಯಾವ ಉಪಾಯದಿಂದಲೂ ಇನ್ನು ನನಗೆ ಗುಣವಾಗಲಾರದು. ನೀವು ಸುಮ್ಮನೆ ತೊಂದರೆ ಪಡಬೇಡಿರಿ" ಎಂದು ಕಟ್ಟುನಿಟ್ಟಾಗಿ ಹೇಳಿಬಿಟ್ಟನು.

ಅದೇ ಅವಸ್ಥೆಯಲ್ಲಿ ಮತ್ತೆ ೩-೪ ದಿನಗಳು ಕ್ರಮಿಸಿದವು. ಇಂದು ಮಾಬಳಜ್ಜನ ಶರೀರದಲ್ಲಿ ಜ್ವರವಿರಲಿಲ್ಲ; ಆದರೆ ವಿಶ್ವನಾಥನ ವಿಷಯದ ಆತನ ನಿದಿಧ್ಯಾಸವೂ, ಆ ಕೆಂಪುಬಣ್ಣದ ಮುಂತ್ರಿಯ ವಿಷಯದ ಆತನ ಹವ್ಯಾಸವೂ ಬಲವತ್ತರಿಸಿದವು ಹರಭಟ್ಟನು ಅಂದು ಮಾತಾಡಿಸಲಿಕ್ಕೆಂದು ಅವನಡೆಗೆ ಬಂದನು. ಆಗ ಮಾಬಳಜ್ಜನು ಒಳ್ಳೇ ಆವೇಶದಿಂದ ತಲೆಗಿಂಬಿನ ಕೆಳಗೆ ಕೈಹಾಕಿ ವಿಶ್ವನಾಥನ ಆ ಕಾಗದವನ್ನು ತೆಗೆದು ದಾಸಿಯಿಂದ ದೀಪ ಹಿಡಿಸಿಕೊಂಡು ಓದತೊಡಗಿದನು; ಆದರೆ ಅಂದು ಅವನಿಗೆ ಆ ಪತ್ರದೊಳಗಿನ ಅಕ್ಷರಗಳೇ ಕಾಣಿಸಲಿಲ್ಲ! ದನಿಯೂ ಏಳಲಿಲ್ಲ!!

ಮಾಬಳಜ್ಜನ ಆ ಸ್ಥಿತಿಯನ್ನು ಕಂಡು, ಎಲ್ಲರಿಗೂ ವ್ಯಥೆಯಾಯಿತು. ಅಂಗೇ ಮೂರೂಸಂಜೆಗೆ ಮಾಬಳಜ್ಜನು ಒಳ್ಳೇ ಗಂಭೀರ ವಾಣಿಯಿಂದ:—ತಮ್ಮಾ, ವಿಸು! ನನ್ನ ಮುಂತ್ರಿಯನ್ನು ಕೊಡಪ್ಪಾ! ಅದಿಲ್ಲದಿದ್ದರೆ ನನಗೆ ಜಯವೇ ದೊರಕುವದಿಲ್ಲ! ಎಂದಂದು, ಕೆಲ ಕ್ಷಣಗಳವರೆಗೆ ಸುಮ್ಮನಿದ್ದನು. ನಂತರ ಒಳ್ಳೇ ಕರುಣವಾಣಿಯಿಂದ: –"ತಮ್ಮಾ ವಿಸು, ವಿಶ್ವನಾಥಾ!-ವಿಶ್ವೇಶ್ವರಾ! ನನ್ನ ಕೆಂಪು ಮುಂತ್ರಿಯನ್ನು ನನಗೆ ಕೊಟ್ಟು ಬಿಡಪ್ಪಾ! ಮುಂತ್ರಿಯನ್ನು ಕಳಕೊಂಡು ನನ್ನ ಆಟವು ಇನ್ನೆಷ್ಟು ವೇಳೆ ನಡದೀತು?" ಎಂದವನೇ ಸ್ತಬ್ಧನಾದನು.

ಆಗ ಶಂಭೂರಾಯನೂ ಹರಭಟ್ಟನೂ ದಾಸಿಯೂ ದೀಪವನ್ನು ಮಾಬಳಜ್ಜನ ಮೋರೆಯ ಎದುರಿಗೆ ಹಿಡಿದು ನೋಡುತ್ತಾರೆ, ಮಾಬಳಜ್ಜನು ಗಂಭೀರ ಮುಖದಿಂದ ಬಿದ್ದುಕೊಂಡಿದ್ದಾನೆ! ಆತನ ದೇಹದೊಳಗಿನ ಅಂತರಾತ್ಮನು ಹೊರಟು ಹೋಗಿದ್ದಾನೆ!! ಅದರಿಂದ ಅದು ಚಲಿಸಲಾರದೆ, ಸ್ಥಿರಗೊಂಡಿದೆ!!!

† § * § †

ಮುಂದೆ ಕೆಲ ದಿನಗಳಲ್ಲಿಯೇ ಚಂದ್ರಕಾಂತನಿಗೆ ಹರಭಟ್ಟನಿಂದ ಒಂದು ಕಾಗದಬಂದಿತು. ಮಾಬಳಜ್ಜನ ಮರಣ ವಾರ್ತೆಯೇ ಆ ಕಾಗದದ ಮುಖ್ಯ ಸಂಗತಿಯಾಗಿತ್ತು.

———

# ಉಪಸಂಹಾರ

ಚಂದ್ರಕಾಂತನು ಶಾರದೆ-ವಿಶ್ವನಾಥರೊಡನೆ ಕಾಶಿಗೆ ಬಂದು ಮಾಬಳಜ್ಜನ ಉತ್ತರಕ್ರಿಯೆಗಳನ್ನು ಬಹು ವಿಜೃಂಭಣೆಯಿಂದ ಮಾಡಿದನು. ತನ್ನ ಸಂಕಟ ಕಾಲದೊಳಗಿನ ಆ ಆಶ್ರಯದಾತೃವಿನ ಬಗ್ಗೆ ಶಾರದೆಗೆ ಪರಮದುಃಖವೆನಿಸಿತು. ಆ ಮನೆಯನ್ನು ಕಂಡ ಕೂಡಲೆ ವಿಶ್ವನಾಥನು:—"ಅಜ್ಜಾ-ಅಜ್ಜಾ!" ಎಂದು ಕೂಗುತ್ತಲೇ ಒಳಗೆ ಹೊದನು; ಆದರೆ ಅಲ್ಲಿಯ ಭಯಾನಕ ದೃಶ್ಯವನ್ನು ಕಂಡು ಆ ಬಾಲಕನು ಬೆದರಿದನು.

* * * † * * *

ಯಾವ ಸಮಾಜದ ಅಂಜಿಕೆಯಿಂದ ಚಂದ್ರಕಾಂತನು ತನ್ನ ಮಡದಿಯಾದ ಶಾರದೆಯನ್ನು ತ್ಯಜಿಸಿದ್ದನೋ, ಆ ಸಮಾಜದ ಮುಖ್ಯಾಧಾರಕನಾದ ಆ ಕ್ಷೇತ್ರಸ್ಥ ಹರಭಟ್ಟನು ಯವನ ಜಾತಿಯ ಒಬ್ಬ ವಿಧೆಯನ್ನು ತಿಳಿದೂ ತಿಳಿದು ಬ್ರಾಹ್ಮಣ ಜಾತಿಯವಳೆಂದು ಹೇಳಿ, ತನ್ನಲ್ಲಿಟ್ಟುಕೊಂಡದ್ದಕ್ಕಾಗಿ ಕಾಶೀನಿವಾಸಿಗಳೆಲ್ಲರೂ ಅವನಿಗೆ ಭವಿಷ್ಕಾರ ಹಾಕಿದ್ದರಿಂದ, ಇತ್ತೀಚಿಗವನು ಕುಲಗೆಟ್ಟು ಮುಸಲ್ಮಾನನಾಗಿ, ಆ ದಾಸಿಯೊಡನೆ ನಿಕಾ ಮಾಡಿಕೊಂಡಿರ ಹತ್ತಿದನು.

+ + + +

ವಿಶ್ವನಾಥನು ದೊಡ್ಡವನಾದರೂ ಅವನಿಗೆ ಮಾಬಳಜ್ಜನ ಹಾಗು ಆತನು ಕೊಟ್ಟ ಆ ಕೆಂಪು ವಜೀರನ ವಿಸ್ಮರಣವಾಗಲಿಲ್ಲ. ಅವನು ಆ ಮಂತ್ರಿಯನ್ನು ಮಾಬಳಜ್ಜನ ಸ್ಮಾರಕವೆಂದು ಒಳ್ಳೇ ಜಾಗ್ರತೆಯಿಂದ ಕಾಪಾಡುತ್ತಿದ್ದನು.

× × × + ×

ಕೆಲ ದಿನಗಳ ವರೆಗೆ ಶಶಿಮುಖಿಯು ಇರುಕಳ ಆಕಳಿನಂತೆ ಶಾರದೆಯೊಡನೆ ಒಳ್ಳೇ ಕುನಸಿನಿಂದ ನಡೆಯುತ್ತಿದ್ದರೂ, ಕಾಲಗತಿಯಿಂದ ಆಕೆಯ ದ್ವೇಷವು ಕಡಿಮೆಯಾಗಿ, ಅವಳು ಶಾರದೆಯನ್ನು ತನ್ನ ಹೊಟ್ಟೆಯ ಮಗಳಂತೆ ಪ್ರೀತಿಸತೊಡಗಿದಳು.

೦ ೦ ೦ ೦ ೦ ೦

ಶಾರದೆಯು ಚಂದ್ರಕಾಂತನ ಸಂಸಾರದ ಒಡತಿಯಾಗಿ ಒಳ್ಳೇ ಸಂತೋಷದಿಂದಿರುತ್ತಿದ್ದರೂ, "ಬರ ಮೂರು ದಿನ ಮಾತು ಅನಗಾ[illegible]ತ್ತೆ, ಮಾರ್ತಂಡರಾಯನು ತನ್ನ ವಿಷಯಕವಾಗಿ ಹಬ್ಬಿಸಿದ ಆ ದುವಾ[illegible]ಯ ನೆನಪಾದೊಡನೆಯೇ ಆಕೆಗೊಂದು ಬಗೆಯ ಉದ್ವೇಗವು ಆಗುತ್ತಿರುತ್ತದೆ.

(ಸಂಪೂರ್ಣ)